ರಾಜ್ಯಪ್ರಗತಿ
25-12-2004

# ರೆಡ್‌ಕ್ರಾಸ್ ಸ್ಥಾಪಕ ಜೀನ್ ಹೆನ್ರಿಡೂನಂಟ್ ಪ್ರತಿಮೆ ಅನಾವರಣ

ಈ ತಿಂಗಳ ಏಳರ ಸಂಜೆ ನಡೆದ ಸರಳ, ಸುಂದರ ಸಮಾರಂಭದಲ್ಲಿ ಕರ್ನಾಟಕದ ರಾಜ್ಯಪಾಲ ಟಿ.ಎನ್.ಚತುರ್ವೇದಿಯವರು ಬೆಂಗಳೂರಿನ ರೇಸ್ ಕೋರ್ಸ್ ರಸ್ತೆಯಲ್ಲಿ ನೂತನವಾಗಿ ನಿರ್ಮಿಸಲಾದ ರೆಡ್ ಕ್ರಾಸ್ ಭವನವನ್ನು ಉದ್ಘಾಟಿಸಿದರಲ್ಲದೆ, ರೆಡ್ ಕ್ರಾಸ್ ಸ್ಥಾಪಕ ಜೀನ್ ಹೆನ್ರಿ ಡೂನಂಟ್ ಅವರ ಪ್ರತಿಮೆಯನ್ನು ಅನಾವರಣಗೊಳಿಸಿದರು.

ಸೊಸೈಟಿಯ ಗೌ|| ಕೋಶಾಧ್ಯಕ್ಷ ಡಬ್ಲ್ಯು.ಪಿ.ಕೃಷ್ಣ ಅವರಿಗೆ ಪುಷ್ಪಗುಚ್ಛಗಳನ್ನು ನೀಡಿ ಗೌರವಿಸಿದರು.

ಪ್ರಾಸ್ತಾವಿಕ ನುಡಿಗಳನ್ನಾಡಿದ ಡಾ|| ಡಿ.ಎಂ. ನಂಜುಂಡಪ್ಪನವರು ಹಿಂದೆ ಉಪಾಧ್ಯಕ್ಷರಾಗಿದ್ದ ಕೆ.ಎಂ.ನಂಜಪ್ಪನವರ ಸೇವೆಯನ್ನು ಶ್ಲಾಘಿಸಿದರು. ಅವರ ಕಾಲದಲ್ಲೇ ರೆಡ್‌ಕ್ರಾಸ್ ಭವನಕ್ಕಾಗಿ ನಿವೇಶನ ಕೊಳ್ಳ



ರಾಜ್ಯಪಾಲ ಟಿ.ಎನ್.ಚತುರ್ವೇದಿ ಅವರು ರೆಡ್‌ಕ್ರಾಸ್ ಭವನ ಉದ್ಘಾಟಿಸುತ್ತಿದ್ದಾರೆ. ಡಾ|| ಡಿ.ಎಂ.ನಂಜುಂಡಪ್ಪ ಮತ್ತು ಸಚಿವ ಪಿ.ಜಿ.ಆರ್.ಸಿಂಧ್ಯಾ ಚಿತ್ರದಲ್ಲಿದ್ದಾರೆ.

ಶೇಷಾದ್ರಿಪುರ ಪದವಿ ಕಾಲೇಜಿನ ವಿದ್ಯಾರ್ಥಿನಿಯರಾದ ಅಶ್ವಿನಿ ಮತ್ತು ಋತಿಕಾ ಸುಶ್ರಾವ್ಯವಾಗಿ ಶೃಂಗೇರಿ ಶಾರದೆಯ ಸ್ತುತಿ ಮಾಡಿ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಇಂಡಿಯನ್ ರೆಡ್ ಕ್ರಾಸ್ ಸೊಸೈಟಿ ಕರ್ನಾಟಕ ಶಾಖೆಯ ಪ್ರಧಾನ ಕಾರ್ಯದರ್ಶಿ ಡಾ|| ಎನ್.ಜಿ. ನಾರಾಯಣ ಸ್ವಾಗತಿಸಿದರು.

ಪ್ರತಿಮೆ ಸ್ಥಾಪನೆಯ ವೆಚ್ಚ ಭರಿಸಿದ ಉದ್ಯಮಿ ಶ್ರೀಕಂಠಾರಾಧ್ಯ (ಪದ್ಮಶ್ರೀ ಆರ್.ಎಂ.ಬಿ.ಆರಾಧ್ಯರ ಪುತ್ರ) ಅವರನ್ನು ರಾಜ್ಯಪಾಲರು ಸನ್ಮಾನಿಸಿ ನೆನಪಿನ ಕಾಣಿಕೆ ನೀಡಿದರು.

ಡಾ|| ಚಂದ್ರಶೇಖರಶೆಟ್ಟಿಯವರು ರಾಜ್ಯಪಾಲರಿಗೆ, ಡಾ|| ಬಾಲಮಣಿಯವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ರಾಜ್ಯದ ಕೈಗಾರಿಕಾ ಸಚಿವ ಪಿ.ಜಿ.ಆರ್. ಸಿಂಧ್ಯಾ ಅವರಿಗೆ, ಸರೋಜ ಕೆ.ಎಂ.ನಂಜಪ್ಪನವರು ರೆಡ್‌ಕ್ರಾಸ್ ಸೊಸೈಟಿಯ ಕರ್ನಾಟಕ ಶಾಖೆ ಉಪಾಧ್ಯಕ್ಷ ಡಾ|| ಡಿ.ಎಂ.ನಂಜುಂಡಪ್ಪನವರಿಗೆ, ಆರ್.ಕೃಷ್ಣ ಅವರು ರೆಡ್‌ಕ್ರಾಸ್ ಸ್ಥಾಪಕರ ಪ್ರತಿಮೆಯನ್ನು ೭೫೦೦೦ ರೂ.ಗಳ ವೆಚ್ಚದಲ್ಲಿ ಮಾಡಿಸಿಕೊಟ್ಟ ಶ್ರೀಕಂಠಾರಾಧ್ಯರಿಗೆ ಮತ್ತು ಮಧುರಾ ಅಶೋಕಕುಮಾರ್ ಅವರು ರೆಡ್‌ಕ್ರಾಸ್

ಲಾಯಿತು ಎಂದರು. ಆಪತ್ಕಾಲದಲ್ಲಿ ಸಾರ್ವಜನಿಕರಿಗೆ ಅಗತ್ಯ ನೆರವು ಒದಗಿಸಲು ಮತ್ತು ಇತರ ಸಾಮಾಜಿಕ ಚಟುವಟಿಕೆಗಳಿಗಾಗಿ ೨ ಕೋಟಿ ರೂಪಾಯಿಗಳ ಕಾಯಂ ನಿಧಿ ಸ್ಥಾಪಿಸಿರುವುದಾಗಿ ಪ್ರಕಟಿಸಿದರು.

ಸಚಿವ ಪಿ.ಜಿ.ಆರ್.ಸಿಂಧ್ಯಾ ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ದಯೆ, ಕರುಣೆ ಮೂಲ ಮಂತ್ರಗಳಾಗಿರುವ ರೆಡ್ ಕ್ರಾಸ್‌ನ ಧ್ಯೇಯವನ್ನು ಮುಕ್ತ ಕಂಠದಿಂದ ಪ್ರಶಂಸಿಸಿ, ಭೂಕಂಪ, ಪ್ರವಾಹಗಳುಂಟಾದಾಗ ರೆಡ್‌ಕ್ರಾಸ್ ಸಂಸ್ಥೆ ಸಲ್ಲಿಸುತ್ತಿರುವ ಮಾನವೀಯ ಸೇವೆಗೆ ಹೋಲಿಕೆಯೇ ಇಲ್ಲವೆಂದರು. ಯುದ್ಧಗಳ ಸಮಯದಲ್ಲೂ ರೆಡ್‌ಕ್ರಾಸ್ ವಹಿಸುವ ಪಾತ್ರವನ್ನು ಸ್ಮರಿಸಿಕೊಂಡು ಯುದ್ಧಗಳು ಆಗಲೇಬಾರದೆಂದು ತಮ್ಮ ಅನಿಸಿಕೆ ವ್ಯಕ್ತಪಡಿಸಿದರು. ರೆಡ್‌ಕ್ರಾಸ್‌ನ ರಕ್ತನಿಧಿಯಲ್ಲಿ ಅನುಪಮ ಸೇವೆ ಸಲ್ಲಿಸುತ್ತಿರುವ ಡಾ|| ರಾಜು ಚಂದ್ರಶೇಖರ್ ಅವರ ಬಗೆಗೆ ಪ್ರಶಂಸೆಯ ಮಾತಾಡಿದರು.

ಕೆ.ಎಂ.ನಂಜಪ್ಪ, ಸ್ಕೌಟ್ಸ್ & ಗೈಡ್ಸ್‌ನ ಮುಖ್ಯಸ್ಥರಾದ ಕೊಂಡಜ್ಜಿ ಷಣ್ಮುಖಪ್ಪ, ಭವನ ನಿರ್ಮಿಸಿದ ಎಸ್ಟೀಮ್ ಆರ್ಕೇಡ್ ಸಂಸ್ಥೆಯ ನಾರಿನ್‌ದಾಸ್ ಬೋದಾರಾಮ್ ಮೊದಲಾದವರು ಉಪಸ್ಥಿತರಿದ್ದರು.

# ರೆಡ್‌ಕ್ರಾಸ್ ಸಂಸ್ಥೆ ಪಾತ್ರ: ಸಚಿವ ಸಿಂಧ್ಯ ಮೆಚ್ಚುಗೆ

ಬೆಂಗಳೂರು, ಡಿ. 7: ಸಾರ್ವಜನಿಕರಲ್ಲಿ ಸೇವಾ ಮನೋಭಾವನೆ ಹೆಚ್ಚಿಸುವಲ್ಲಿ ರೆಡ್‌ಕ್ರಾಸ್ ಸಂಸ್ಥೆ ಪ್ರಮುಖ ಪಾತ್ರವಹಿಸುತ್ತಿದೆ ಎಂದು ಕೈಗಾರಿಕಾ ಸಚಿವ ಪಿ.ಜಿ.ಆರ್. ಸಿಂಧ್ಯ ಇಂದು ಇಲ್ಲಿ ಅಭಿಪ್ರಾಯಪಟ್ಟರು.

ನಗರದಲ್ಲಿ ನಿರ್ಮಿಸಿರುವ ಇಂಡಿನ್ ರೆಡ್ ಕ್ರಾಸ್ ಸೊಸೈಟಿಯ ನೂತನ ಕಟ್ಟಡದ ಉದ್ಘಾಟನಾ ಸಮಾರಂಭದಲ್ಲಿ ಪಾಲ್ಗೊಂಡು ಮಾತನಾಡಿದ ಅವರು, ರಕ್ತ ದಾನ ಸೇರಿದಂತೆ ಆರೋಗ್ಯ ಕ್ಷೇತ್ರದಲ್ಲಿ ರೆಡ್‌ಕ್ರಾಸ್ ಸಲ್ಲಿಸುತ್ತಿರುವ ಸೇವೆ ಮೆಚ್ಚುವಂತಹದ್ದು. ಜನರಲ್ಲಿ ಸೇವಾ ಮನೋಭಾವನೆ ಹೆಚ್ಚಿಸಲು ರೆಡ್ ಕ್ರಾಸ್ ಸಂಸ್ಥೆ ನಡೆಸುತ್ತಿರುವ ಪ್ರಚಾರಾಂದೋಲನ ಇತರೆ ಸಂಸ್ಥೆಗಳಿಗೆ ಮಾದರಿಯಾಗಿದೆ ಎಂದು ಮುಕ್ತ ಕಂಠದಿಂದ ಶ್ಲಾಘಿಸಿದರು.

ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಕರ್ನಾಟಕ ಘಟಕದ ಅಧ್ಯಕ್ಷರಾಗಿರುವ ರಾಜ್ಯಪಾಲ ಟಿ.ಎನ್. ಚತುರ್ವೇದಿ ಅವರು ಮಾತನಾಡಿ, ಸಂಸ್ಥೆಗೆ ಶೀಘ್ರವೇ ನೂತನ ಪದಾಧಿಕಾರಿಗಳನ್ನು ನೇಮಿಸಲು ಕ್ರಮ ಕೈಗೊಳ್ಳಲಾಗುತ್ತದೆ ಎಂದು ಪ್ರಕಟಿಸಿದರು.

ರಾಜ್ಯದಲ್ಲಿ ರೆಡ್ ಕ್ರಾಸ್ ಸಂಸ್ಥೆ ಮತ್ತಷ್ಟು ಚುರುಕಿನಿಂದ ಕಾರ್ಯನಿರ್ವಹಿಸಿ ಆರೋಗ್ಯ ಕ್ಷೇತ್ರದ ಅಭಿವೃದ್ಧಿಗೆ ಸಹಕಾರಿಯಾಗುವಂತಹ ಯೋಜನೆ ರೂಪಿಸಬೇಕಾಗಿದೆ ಎಂದು ಅವರು ಅಭಿಪ್ರಾಯಪಟ್ಟರು.

ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ಘಟಕದ ಉಪಾಧ್ಯಕ್ಷ ಡಾ. ಡಿ.ಎಂ. ನಂಜುಂಡಪ್ಪ, ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ, ಖಜಾಂಚಿ ಡಬ್ಲ್ಯು.ಪಿ. ಕೃಷ್ಣ ಹಾಗೂ ಇತರರು ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.



ಬೆಂಗಳೂರಿನಲ್ಲಿ ಮಂಗಳವಾರ ರಾಜ್ಯಪಾಲ ಟಿ.ಎನ್. ಚತುರ್ವೇದಿ ಅವರು ರೆಡ್‌ಕ್ರಾಸ್ ಭವನವನ್ನು ಉದ್ಘಾಟಿಸಿದರು. ಸಚಿವ ಪಿಜಿಆರ್ ಸಿಂಧ್ಯ ಉಪಸ್ಥಿತರಿದ್ದರು.

ವಿಜಯ ಕರ್ನಾಟಕ
ಬುಧವಾರ 8 ಡಿಸೆಂಬರ್ 2004

# ರೆಡ್ ಕ್ರಾಸ್‌ನ ಸಮಾರಂಭದಲ್ಲಿ ಅಸಮಾನತೆ ನಿವಾರಣೆ ಮಾತು

ಬೆಂಗಳೂರು, ಡಿ. 7 - ರಾಜ್ಯದ ಸಮಗ್ರ ಅಭಿವೃದ್ಧಿಯ ದೃಷ್ಟಿಯಿಂದ ನಂಜುಂಡಪ್ಪ ವರದಿ ಜಾರಿಗೆ ತರಲು ಸಮ್ಮಿಶ್ರ ಸರಕಾರ ಬದ್ಧವಾಗಿದೆ ಎಂದು ಕೈಗಾರಿಕಾ ಸಚಿವ ಪಿ.ಜಿ.ಆರ್. ಸಿಂಧ್ಯಾ ಅಭಿಪ್ರಾಯ ಪಟ್ಟಿದ್ದಾರೆ.

ಭಾರತೀಯ ರೆಡ್ ಕ್ರಾಸ್‌ನ ರಾಜ್ಯ ಶಾಖೆಯ ಕಟ್ಟಡ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸಿ ಮಂಗಳವಾರ ಮಾತನಾಡಿದರು.

ರೆಡ್ ಕ್ರಾಸ್ ಸಂಸ್ಥೆ ಜಾಗತಿಕ ಮಟ್ಟದಲ್ಲಿ ಉತ್ತಮ ಸೇವೆ ಸಲ್ಲಿಸುತ್ತಿದೆ. ಜಾತಿ, ಧರ್ಮದ ಗೋಡೆ ಮೀರಿ ಮಾನವೀಯ ಸಂಬಂಧಗಳನ್ನು ಬೆಸೆಯುತ್ತಿದೆ. ಇಂಥ ಸಂಸ್ಥೆಯ ಜವಾಬ್ದಾರಿಯನ್ನು ಸೇವಾ ಮನೋಭಾವವುಳ್ಳವರಿಗೆ ವಹಿಸಬೇಕು. ಸಂಸ್ಥೆಯ ಕಾರ್ಯ ಗ್ರಾಮೀಣ ಪ್ರದೇಶಗಳಿಗೂ ವ್ಯಾಪಿಸಬೇಕು. ಅಪಘಾತ ಮತ್ತು ಗುಣಪಡಿಸಲಾಗದ ಕಾಯಿಲೆಗಳು ಹೆಚ್ಚುತ್ತಿರುವ ಇಂದಿನ ದಿನಗಳಲ್ಲಿ ಸಂಸ್ಥೆ ಇನ್ನಷ್ಟು ಪ್ರಬಲ ಶಕ್ತಿಯಾಗಿ ಹೊರ ಹೊಮ್ಮಬೇಕು ಎಂದು ಆಶಿಸಿದರು.

ಸಂಸ್ಥೆಯ ರಾಜ್ಯ ಶಾಖೆ ಉಪಾಧ್ಯಕ್ಷ ಹಾಗೂ ಅರ್ಥಶಾಸ್ತ್ರಜ್ಞ ಡಾ .ಡಿ.ಎಂ. ನಂಜುಂಡಪ್ಪ ಮಾತನಾಡಿ, ಸಂಸ್ಥೆ ಆರಂಭವಾದಂದಿನಿಂದ ಇಂದಿನವರೆಗೂ ಸರಕಾರದ ನೆರವು ಪಡೆದಿಲ್ಲ. ರಾಜ್ಯದ 80 ತಾಲೂಕುಗಳಲ್ಲಿ ಈಗಾಗಲೇ ಶಾಖೆ ತೆರೆಯಲಾಗಿದೆ. ಸಂಸ್ಥೆಯ ಕಾರ್ಯವ್ಯಾಪ್ತಿಯನ್ನು ಇನ್ನಷ್ಟು ವಿಸ್ತರಿಸಲಾಗುವುದು ಎಂದು ಹೇಳಿದರು.

ರಾಜ್ಯಪಾಲ ಟಿ.ಎನ್. ಚತುರ್ವೇದಿ ಕಟ್ಟಡ ಉದ್ಘಾಟಿಸಿ, ರೆಡ್ ಕ್ರಾಸ್ ಸಂಸ್ಥೆಯ ಸಂಸ್ಥಾಪಕ ಜೇನ್ ಹೆನ್ರಿ ಡ್ಯೂನ್ ಅವರ ಪುತ್ಥಳಿ ಅನಾವರಣ ಮಾಡಿದರು.

ಸಂಸ್ಥೆಯ ಪ್ರಧಾ ನ ಕಾರ್ಯದರ್ಶಿ ಎನ್.ಜಿ. ನಾರಾಯಣ, ಖಜಾಂಚಿ ಪಿ. ಕೃಷ್ಣ ಹಾಜರಿದ್ದರು.




ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯ ನೂತನ ಕಟ್ಟಡ ಉದ್ಘಾಟನಾ ಸಮಾರಂಭದಲ್ಲಿ ಸಂಸ್ಥೆಯ ಸಂಸ್ಥಾಪಕ ಜೇನ್ ಹೆನ್ರಿ ಡ್ಯೂನ್ ಅವರ ಪುತ್ಥಳಿಯನ್ನು ರಾಜ್ಯಪಾಲ ಟಿ.ಎನ್. ಚತುರ್ವೇದಿ ಮಂಗಳವಾರ ಅನಾವರಣ ಮಾಡಿದರು. ಸಚಿವ ಪಿ.ಜಿ.ಆರ್. ಸಿಂಧ್ಯಾ ಹಾಜರಿದ್ದರು.



ರಾಜ್ಯಪಾಲ ಟಿ.ಎನ್. ಚತುರ್ವೇದಿ ಅವರು ಮಂಗಳವಾರ ಬೆಂಗಳೂರಿನಲ್ಲಿ ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿಯ ನೂತನ ಸಂಕೀರ್ಣ 'ರೆಡ್‌ಕ್ರಾಸ್ ಭವನ' ಉದ್ಘಾಟಿಸಿದರು. ಸೊಸೈಟಿಯ ಉಪಾಧ್ಯಕ್ಷ, ಆರ್ಥಿಕ ತಜ್ಞ ಡಾ.ಡಿ.ಎಂ.ನಂಜುಂಡಪ್ಪ, ಸಚಿವ ಪಿ.ಜಿ.ಆರ್.ಸಿಂಧ್ಯ ಚಿತ್ರದಲ್ಲಿದ್ದಾರೆ.

# ಸೇವಾ ಮನೋಭಾವ ಬೆಳೆಸಲು ಆಂದೋಲನ

ಬೆಂಗಳೂರು, ಡಿ.7– ವೈದ್ಯರು, ದಾದಿಯರಲ್ಲಿ ಸೇವಾ ಮನೋಭಾವ ಬೆಳೆಸಲು ರೆಡ್‌ಕ್ರಾಸ್ ಸಂಸ್ಥೆ ಆಂದೋಲನ ಹಮ್ಮಿಕೊಳ್ಳಬೇಕು ಎಂದು ಕೈಗಾರಿಕಾ ಸಚಿವ ಪಿ.ಜಿ.ಆರ್.ಸಿಂಧ್ಯ ಇಂದು ಕರೆ ನೀಡಿದರು.

ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿಯು ನಗರದಲ್ಲಿ ನಿರ್ಮಿಸಿರುವ 'ರೆಡ್ ಕ್ರಾಸ್' ಭವನದ ಉದ್ಘಾಟನಾ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡುತ್ತಿದ್ದರು.

ಆಪತ್‌ಕಾಲದಲ್ಲಿ ನೆರವಿಗೆ ಧಾವಿಸುವ ಕಾರ್ಯದ ಜೊತೆಗೆ, ವೈದ್ಯರಲ್ಲಿ ಸೇವಾ ಮನೋಭಾವ ಮೂಡಿಸಲು ಸಂಸ್ಥೆ ಕಾರ್ಯ ತತ್ಪರರಾಗಬೇಕು ಎಂದು ಹೇಳಿದರು.

ರಾಜ್ಯಪಾಲ ಟಿ.ಎನ್.ಚತುರ್ವೇದಿ, ಇದೇ ಸಂದರ್ಭದಲ್ಲಿ 'ರೆಡ್‌ಕ್ರಾಸ್ ಭವನ' ಮತ್ತು 'ರೆಡ್ ಕ್ರಾಸ್' ಸಂಸ್ಥೆಯ ಸ್ಥಾಪಕ, ಶಾಂತಿಗಾಗಿ ಮೊದಲ ನೊಬೆಲ್ ಪ್ರಶಸ್ತಿ

## ಸಚಿವ ಸಿಂಧ್ಯ ಕರೆ

ಪುರಸ್ಕೃತರಾದ ಜೀನ್ ಹೆನ್ರಿ ಡುನಂಟ್ ಅವರ ಪುತ್ಥಳಿ ಅನಾವರಣ ಮಾಡಿದರು.

ಸಂಸ್ಥೆಯ, ರಾಜ್ಯ ಶಾಖೆಯ ಉಪಾಧ್ಯಕ್ಷ ಡಾ.ಡಿ.ಎಂ.ನಂಜುಂಡಪ್ಪ ಅವರು, 'ನೂತನ ಕಟ್ಟಡವು ರೆಡ್‌ಕ್ರಾಸ್ ಸಂಸ್ಥೆಯ ಕೇಂದ್ರ ಕಚೇರಿಯನ್ನು ಸಂಸ್ಥೆಯ ಆದಾಯ ಮೂಲ ಆಗಲಿದೆ' ಎಂದು ತಿಳಿಸಿದರು.

ಸಂಸ್ಥೆಯು ಪ್ರಸ್ತುತ ರಾಜ್ಯದ ಒಟ್ಟು 175 ತಾಲ್ಲೂಕುಗಳ ಪೈಕಿ 80 ತಾಲ್ಲೂಕುಗಳಲ್ಲಿ ಕಾರ್ಯ ಚಟುವಟಿಕೆಯನ್ನು ಹೊಂದಿದ್ದು, ಒಟ್ಟು ಎರಡು ಕೋಟಿ ರೂಪಾಯಿಗಳ ನಿಧಿಯನ್ನು ಹೊಂದಿದೆ ಎಂದರು.

'ರೆಡ್‌ಕ್ರಾಸ್ ಭವನ' ನಾಲ್ಕು ಅಂತಸ್ತು ಹೊಂದಿದ್ದು, ರೇಸ್‌ಕೋರ್ಸ್ ರಸ್ತೆಯಲ್ಲಿ ಪ್ರಮುಖ ಸ್ಥಳದಲ್ಲಿ ತಲೆ ಎತ್ತಿದೆ. ರೆಡ್‌ಕ್ರಾಸ್ ಸಂಸ್ಥೆಯ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ, ಖಜಾಂಚಿ ಡಬ್ಲ್ಯೂ.ಪಿ.ಕೃಷ್ಣ ಅವರು ವೇದಿಕೆಯಲ್ಲಿ ಹಾಜರಿದ್ದರು.

ಸಂಯುಕ್ತ ಕರ್ನಾಟಕ, ಬೆಂಗಳೂರು

8-12-2004

# 'ರೆಡ್ ಕ್ರಾಸ್ ಸಂಸ್ಥೆ ಬಗ್ಗೆ ನಾಗರಿಕರಿಗೆ ಅರಿವು ಅಗತ್ಯ'

ಬೆಂಗಳೂರು, ಡಿ. 7- ಭಾರತೀಯ ರೆಡ್ ಕ್ರಾಸ್ ಸಂಸ್ಥೆ ತನ್ನ ಕಾರ್ಯ ಚಟುವಟಿಕೆಗಳ ಬಗ್ಗೆ ಸಾಮಾನ್ಯ ಜನರಲ್ಲಿ ತಿಳಿವಳಿಕೆ ಮೂಡಿಸಲು ಶ್ರಮಿಸಬೇಕೆಂದು ಕೈಗಾರಿಕಾ ಸಚಿವ ಪಿ.ಜಿ.ಆರ್. ಸಿಂಧ್ಯಾ ಕರೆ ನೀಡಿದ್ದಾರೆ.

ಪ್ರಕೃತಿ ವಿಕೋಪಗಳಾದಾಗ, ಯುದ್ಧಗಳು ನಡೆದಾಗ ಸಂಸ್ಥೆ ಮುಂಚೂಣಿಯಲ್ಲಿದ್ದು ನೊಂದ ಜನರಿಗೆ ಸಾಂತ್ವನ ನೀಡುವುದರ ಜೊತೆಗೆ ಕೈಲಾದಷ್ಟು ಸಹಾಯಹಸ್ತ ನೀಡುತ್ತದೆ. ಈ ಬಗ್ಗೆ ಒಂದು ವರ್ಗಕ್ಕೆ ಮಾತ್ರ ಮಾಹಿತಿ ಇದ್ದು ಸಾಮಾನ್ಯ ಜನರಿಗೂ ಈ ಮಾಹಿತಿ ಸಿಗುವಂತಾಗಬೇಕು ಎಂದ ಅವರು ಈ ನಿಟ್ಟಿನಲ್ಲಿ ಸಂಸ್ಥೆ ಕಾರ್ಯಕ್ರಮಗಳನ್ನು ರೂಪಿಸಬೇಕು ಎಂದರು.

ಬೆಂಗಳೂರಿನ ರೇಸ್ ಕೋರ್ಸ್ ರಸ್ತೆಯಲ್ಲಿ ಹೊಸದಾಗಿ ನಿರ್ಮಿಸಿದ ರೆಡ್ ಕ್ರಾಸ್ ಭವನದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸಿ ಅವರು ಮಾತನಾಡುತ್ತಿದ್ದರು.

ಈ ಸಂಸ್ಥೆಯ ಚಟುವಟಿಕೆಗಳು, ಜನರ ಸೇವಾ ಮನೋಭಾವ ಒಂದು ಆಂದೋಲನವಾಗಿ ರೂಪುಗೊಳ್ಳುವ ಅಗತ್ಯವಿದೆ ಎಂದ ಅವರು ನೊಂದ ಜನರ ಬಗ್ಗೆ ಬೇರೆ ಜನರಿಗೆ ಕರುಣೆ ಹುಟ್ಟಲು ಈ ಸಂಸ್ಥೆ ಪ್ರೇರಣೆಯಾಗಲಿ ಎಂದು ಹಾರೈಸಿದರು.

ಸಂಸ್ಥೆಯ ಉಪಾಧ್ಯಕ್ಷ ಹಾಗೂ ಆರ್ಥಿಕ ತಜ್ಞ ಡಾ. ಡಿ.ಎಂ. ನಂಜುಂಡಪ್ಪ ಮಾತನಾಡಿ, ಸರ್ಕಾರ ಕಟ್ಟಡದ ನಿರ್ಮಾಣಕ್ಕಾಗಿ ಈಗಾಗಲೇ ಸಾಕಷ್ಟು ಹಣ ಬಿಡುಗಡೆ ಮಾಡಿರುವುದಕ್ಕೆ ಕೃತಜ್ಞತೆ ವ್ಯಕ್ತಪಡಿಸಿ 20 ಲಕ್ಷ ರೂ. ಬಾಕಿ ಬರಬೇಕಿದ್ದು ಶೀಘ್ರವೇ ಬಿಡುಗಡೆ ಮಾಡುವಂತೆ ಕೋರಿದರು.

ರಾಜ್ಯದ 175 ತಾಲ್ಲೂಕುಗಳ ಪೈಕಿ 80 ತಾಲ್ಲೂಕುಗಳಲ್ಲಿ ಸಂಸ್ಥೆಯ ಶಾಖೆಗಳು ಚುರುಕಾಗಿ ಕೆಲಸ ಮಾಡುತ್ತಿದ್ದು ಹಣಕಾಸಿನ ಕೊರತೆಯಿಂದಾಗಿ ಉಳಿದ ತಾಲ್ಲೂಕುಗಳ ಕಡೆ ಈವರೆಗೆ ಗಮನ ನೀಡಿಲ್ಲ ಎಂದು ತಿಳಿಸಿ ಹೊಸದಾಗಿ ನಿರ್ಮಿಸಿರುವ ಭವನವನ್ನು ಬಾಡಿಗೆ ನೀಡುವುದರ ಮೂಲಕ ಬರುವ ಹಣದಲ್ಲಿ ಮುಂದಿನ ದಿನಗಳಲ್ಲಿ ಮತ್ತಷ್ಟು ಹೊಸ ಚಟುವಟಿಕೆಗಳನ್ನು ಹಮ್ಮಿಕೊಳ್ಳುವುದಾಗಿ ತಿಳಿಸಿದರು.

ರಾಜ್ಯಪಾಲ ಟಿ.ಎನ್. ಚತುರ್ವೇದಿ ಭವನವನ್ನು ಉದ್ಘಾಟಿಸುವುದರ ಜೊತೆಗೆ ಜೀನ್ ಹೆನ್ರಿ ಡುನಾಂಟ್ ಅವರ ಪುತ್ಥಳಿಯನ್ನು ಅನಾವರಣಗೊಳಿಸಿದರು.

ಸಂಸ್ಥೆಯ ಗೌರವ ಕೋಶಾಧ್ಯಕ್ಷ ಡಬ್ಲ್ಯು.ಪಿ. ಕೃಷ್ಣ, ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ, ಆರೋಗ್ಯ ಇಲಾಖೆಯ ಕಾರ್ಯದರ್ಶಿ ಶಮೀವುಲ್ಲಾ, ಪುತ್ಥಳಿ ಸ್ಥಾಪನೆಗೆ ಹಣಕಾಸು ನೆರವು ಒದಗಿಸಿದ ಆರಾಧ್ಯ, ಕಟ್ಟಡ ನಿರ್ಮಾಪಕರಾದ ನರೀಂದಾಸ್ ಬೋದಾರಾಂ ಮುಂತಾದವರು ವೇದಿಕೆಯ ಮೇಲೆ ಉಪಸ್ಥಿತರಿದ್ದರು.



*ಬೆಂಗಳೂರಿನ ರೇಸ್‌ಕೋರ್ಸ್ ರಸ್ತೆಯಲ್ಲಿ ಹೊಸದಾಗಿ ನಿರ್ಮಿಸಿದ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಭವನವನ್ನು ಮಂಗಳವಾರ ರಾಜ್ಯಪಾಲ ಟಿ.ಎನ್. ಚತುರ್ವೇದಿ ಉದ್ಘಾಟಿಸಿದರು. ಕೈಗಾರಿಕಾ ಸಚಿವ ಪಿ.ಜಿ.ಆರ್. ಸಿಂಧ್ಯಾ, ಆರ್ಥಿಕ ತಜ್ಞ ಮತ್ತು ಸಂಸ್ಥೆಯ ಉಪಾಧ್ಯಕ್ಷ ಡಾ.ಡಿ.ಎಂ. ನಂಜುಂಡಪ್ಪ ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.*

ಬೆಂಗಳೂರು ಸಂಜೆವಾಣಿ ಸೋಮವಾರ 6 ಡಿಸೆಂಬರ್ 2004




ಇತ್ತೀಚೆಗೆ ಚೆನ್ನೈನಲ್ಲಿ ನಡೆದ ರಾಷ್ಟ್ರೀಯ ಮಟ್ಟದ ಕರಾಟೆ ಟೂರ್ನಮೆಂಟಿನಲ್ಲಿ ಕೊರೆನೊ ಶಿತು ರ್ಯು ಕರಾಟೆ ಶಾಲೆ 3 ಚಿನ್ನ, 8 ಬೆಳ್ಳಿ ಹಾಗೂ 3 ಕಂಚಿನ ಪದಕದೊಂದಿಗೆ ಚಾಂಪಿಯನ್ ಗಳಿಸಿತು. ಚಿತ್ರದಲ್ಲಿ ಕರಾಟೆ ತರಬೇತುದಾರರೊಂದಿಗೆ ಮಕ್ಕಳನ್ನು ಕಾಣಬಹುದು.

[illegible] ಬಿಐದ ಸದಸ್ಯರ [illegible] ಳಿಸಿ, ನಂತರ [illegible] 345 ಹೊಸ ಸದಸ್ಯರ [illegible] ದಾಖಲೆಗಳನ್ನು ಸೃಷ್ಟಿಸಿಕೊಂಡು, ಅದಕ್ಕೆ ಸಂಬಂಧಿಸಿ 18 ಲಕ್ಷ ಹಣವನ್ನು ಸಂಸ್ಥೆಗೆ ಚಿಟಿ ಮೂಲಕ ಸಂದಾಯ ಮಾಡಿ ಉದ್ಧಟತನ ಮೆರೆದಿರುವ ಪ್ರಸಂಗ ಈಗ ಭಾರೀ ಆತಂಕ ಮತ್ತು ಸಂಘರ್ಷಕ್ಕೆ ದಾರಿ ಮಾಡಿಕೊಟ್ಟಿರುವುದು ಸಂಸ್ಥೆಯಲ್ಲಿ ಒಂದು ರೀತಿಯ ಕೋಲಾಹಲವನ್ನು ಸೃಷ್ಟಿಸಿಬಿಟ್ಟಿದೆ. ಆ ಸಭೆಯಲ್ಲಿ 34 ಮಂದಿ ಭಾಗವಹಿಸಿದ್ದು, ಅದರಲ್ಲಿ 27 ಮಂದಿ ಸದಸ್ಯರು ಒಂದೇ ಗುಂಪಿಗೆ ಸೇರಿದವರಾಗಿದ್ದು, ಮಿಕ್ಕವರು ಅದೆಷ್ಟೇ ವಿರೋಧ ಮಾಡಿದರೂ ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಡಬ್ಲ್ಯೂ.ಹೆಚ್. ಹನುಮಂತಪ್ಪನವರ ವಂಶ ಪಾಳೇಗಾರಿಕೆ ಮೆರೆದಿದೆ.

ಸಂಸ್ಥೆಯ 1250 ಸದಸ್ಯರಲ್ಲಿ ಗುಂಪುಗಾರಿಕೆ ಆಧಾರದ ಮೇಲೆ ಸದಸ್ಯರನ್ನು ವಿಂಗಡಿಸಲು ನೋಡಿದರೆ ಜೆ.ಕೆ. ಶ್ರೀನಿವಾಸ್‌ರ ಗುಂಪು ದೊಡ್ಡದಾಗಿಯೇ ಇದೆ. 600 ಸದಸ್ಯ ಬಲ ಅದಕ್ಕಿದೆ. ಮಿಕ್ಕಂತೆ ಕೆ.ಎಂ. ನಂಜಪ್ಪನವರ ಗುಂಪಿಗೆ 400 ಸದಸ್ಯರ ಶಕ್ತಿಯಿದೆ. ಮಿಕ್ಕಂತೆ ಡಬ್ಲ್ಯೂ.ಹೆಚ್. ಗುಂಪು ಕೇವಲ 250 ರಷ್ಟಿದೆ.

### ಅಧಿಕಾರ ವಂಚಿತ ಜೆಕೆಎಸ್ ಗುಂಪು

ಈ ಹಿಂದೆ ಜೆಕೆಎಸ್‌ರ ಗುಂಪು ಅಧಿಕಾರ ಹಿಡಿದು ಸಂಸ್ಥೆಯ ಶ್ರೇಯೋಭಿವೃದ್ಧಿಗೆ ಪ್ರಾಮಾಣಿಕವಾಗಿ, ಯೋಜನಾಬದ್ಧವಾಗಿ ದುಡಿಯಿತು. ಇದರಿಂದ ಪ್ರತಿಷ್ಠೆ ಮುಕ್ಕಾದಂತೆ, ತಾವಂದುಕೊಂಡಂತೆ ಅನುಕೂಲವಾಗಲಿಲ್ಲ ಎಂಬ ವ್ಯಥೆಯಿಂದ ಡಬ್ಲ್ಯೂ.ಹೆಚ್. ಗುಂಪು ಮತ್ತು ಕೆ.ಎಂ. ನಂಜಪ್ಪ ಗುಂಪು ಒಟ್ಟಾಗಿ ಸೇರಿಕೊಂಡು ಒಂದು ತಂಡ ಮಾಡಿಕೊಂಡಿತು. ಕೆಲವೇ ಮತಗಳ ಅಂತರದಲ್ಲಿ ಈ ಹೊಸ ಸಮೀಕರಣ ದಿಢೀರನೆ ಹುಟ್ಟಿಕೊಂಡಿದ್ದರಿಂದ ಜೆಕೆಎಸ್ ಗುಂಪು ಅಧಿಕಾರ ವಂಚಿತವಾಗಬೇಕಾಯಿತು.

ಸಂಸ್ಥೆಯನ್ನು ತನ್ನ ಮುಷ್ಟಿಗೆ ತೆಗೆದುಕೊಂಡ ಡಬ್ಲ್ಯೂ.ಹೆಚ್. ಗುಂಪು ಎಂದೆಂದಿಗೂ ಅಧಿಕಾರ ತನ್ನದೇ ಆಗಿರಬೇಕೆಂಬ ದಾಹವನ್ನು ಮುಂದಿಟ್ಟುಕೊಂಡು ಪ್ರತೀ ಬಾರಿ ಆ ಗುಂಪು ಈ ಗುಂಪನ್ನು ನಂಬಿಕೊಂಡು ಅಧಿಕಾರ ಪಡೆಯಲಾಗದು ಎಂಬ ದುರುದ್ದೇಶ ಮುಂದಿಟ್ಟುಕೊಂಡು 2003 ರ ಜೂನ್‌ನಲ್ಲಿ 345 ಆಜೀವ ಸದಸ್ಯರ ಸೇರ್ಪಡೆ ಮಾಡಿಕೊಳ್ಳಲು ತರಾವರಿ ತಂತ್ರಗಾರಿಕೆ, ಕುತ್ಸಿತ ವ್ಯವಹಾರಗಳನ್ನು ಮಾಡಿತ್ತು.

ಸಾರ್ವಜನಿಕರಿಂದ ಸೀಟು ಮತ್ತಿತರ ಬಾಬುಗಳಲ್ಲಿ ಸಂಗ್ರಹಿಸಿದ ಹಣವನ್ನೇ ಈ ಹೊಸ ಸದಸ್ಯರ (345 ಸದಸ್ಯರಿಗೆ ತಲಾ 5000 ರೂಪಾಯಿಗಳಂತೆ) ಸದಸ್ಯತ್ವ ಹಣ 18 ಲಕ್ಷಗಳನ್ನು ತಮ್ಮ ಕೈಯಿಂದಲೇ ಸಂಸ್ಥೆಗೆ ಸಂದಾಯ ಮಾಡಿತು. ಆದರೆ ಜೆಕೆಎಸ್ ಗುಂಪು ತನಗೆ ಬೇಕಾದವರಿಗೆ 200 ಜನರಿಗೆ ಸದಸ್ಯತ್ವ ಕೊಡಿ ಎಂದು ಅರ್ಜಿಗಳನ್ನು ಸಲ್ಲಿಸಿದ್ದರೂ ಅದರಲ್ಲಿ ಒಬ್ಬರಿಗೂ ಕೊಡುವ ಉದಾರತೆಯನ್ನು ತೋರಲಿಲ್ಲ.

ಅಂದರೆ ಇದರಲ್ಲಿ ಆಡಳಿತಶಾಹಿ ಕಪಿಮುಷ್ಟಿಯನ್ನು ಇದೇ ಕುಟುಂಬದವರು ನಿರಂತರವಾಗಿ ಸಂಸ್ಥೆಯಲ್ಲಿ 'ಚಲಾಯಿಸುವ ದುರುದ್ದೇಶದ ಕತೆ ಇದರಿಂದ ವ್ಯಕ್ತವಾದಂತಾಯಿತು. ಈ ಹೊಸ ಸದಸ್ಯರು ಯಾರು, ಅವರ ವಿಳಾಸಗಳೇನು ಮುಂತಾಗಿ ಪ್ರಶ್ನಿಸಿ ವಿವರ ಕೊಡಿ ಅಂತ ಜೆಕೆಎಸ್ ತಂಡ ಪರಿಪರಿಯಾಗಿ ಕೇಳಿದರೂ ಯಾವುದೇ ಸೂಕ್ತ ಉತ್ತರ ದೊರಕದೇ ಹೋಯಿತು. ಅಲ್ಲಿಂದಲೇ ಜೆಕೆಎಸ್ ಗುಂಪು ಅಖಾಡಕ್ಕೆ ಇಳಿಯತೊಡಗಿತು.

## ಏಕ ಕುಟುಂಬದ ಕಪಿಮುಷ್ಟಿ ಹೇಗಿದೆ?



ಶೇಷಾದ್ರಿಪುರಂ ಶಿಕ್ಷಣ ಸಂಘದ ಆಡಳಿತ ನಡೆಸುತ್ತಿರುವ ಏಕವ್ಯಕ್ತಿ ಕುಟುಂಬ ಹೇಗೆ ಸಂಸ್ಥೆಯನ್ನು ತನ್ನ ಕಪಿಮುಷ್ಟಿಯಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಿದೆ ಎಂಬ ವಿವರಗಳನ್ನು ಗಮನಿಸಿರಿ:

ಡಬ್ಲ್ಯೂ.ಪಿ. ಅನಿಲ್‌ಕುಮಾರ್ ಸಂಸ್ಥೆಯ ಉಪಾಧ್ಯಕ್ಷರಾಗಿದ್ದಾರೆ.

ಇದೇ ಕುಟುಂಬಕ್ಕೆ ಸೇರುವ ಟಿ.ಎಸ್. ಹಂಜಾರಪ್ಪ ಸಂಸ್ಥೆಯ ಖಜಾಂಚಿಯಾಗಿದ್ದು, ಹಣಕಾಸಿನ ಚಟುವಟಿಕೆ, ವ್ಯವಹಾರವನ್ನು ಹತೋಟಿಯಲ್ಲಿಟ್ಟುಕೊಳ್ಳುವ ಪ್ರಯತ್ನ ಮಾಡಿರುವುದು ಗೋಚರವಾಗುತ್ತದೆ.

ಡಬ್ಲ್ಯೂ.ಹೆಚ್. ದೇವಕುಮಾರ್ ಸಂಸ್ಥೆಯಲ್ಲಿನ ಸಿಬ್ಬಂದಿ ನೇಮಕಾತಿ ಸಮಿತಿ ಅಧ್ಯಕ್ಷರಾಗಿದ್ದಾರೆ. ಯಾವುದೇ ನೇಮಕಾತಿಯೂ ಈ ಕುಟುಂಬದ ಹುಕುಂನಂತೆಯೇ ನಡೆಯಬೇಕಾಗಿದೆ.

ಡಬ್ಲ್ಯೂ.ಪಿ. ರಾಮಕೃಷ್ಣ ಕಟ್ಟಡ ನಿರ್ಮಾಣ ಸಮಿತಿ ಅಧ್ಯಕ್ಷರಾಗಿದ್ದುಕೊಂಡು, ಯಾವುದೇ ಹೊಸ ಕಟ್ಟಡ ನಿರ್ಮಾಣ, ನಿರ್ವಹಣೆ ಬಾಬ್ತುಗಳು ಇವರ ಮೂಲಕವೇ ಜರುಗುವಂತೆ ನೋಡಿಕೊಳ್ಳಲಾಗಿದೆ. ಇದೇನೂ ಕಡಿಮೆ ವ್ಯವಹಾರದ ಸಂಗತಿಯಲ್ಲ.

ಇದೇ ಕುಟುಂಬಕ್ಕೆ ಸೇರುವ ಎ.ಆರ್. ಶ್ರೀನಿವಾಸಯ್ಯ ಕೊಳ್ಳುವ ಸಮಿತಿ ಅಧ್ಯಕ್ಷರಾಗಿದ್ದಾರೆ. ಪ್ರತಿಯೊಂದು ಐಟಂ ಕೊಳ್ಳುವಿಕೆಯೂ ಈ ಮಹಾನುಭಾವರ ಆಣತಿಯಂತೆಯೇ ನಡೆಯಬೇಕು.

ಇದಲ್ಲದೆ ಡಬ್ಲ್ಯೂ.ಪಿ. ಶಿವಕುಮಾರ್, ಡಬ್ಲ್ಯೂ.ಡಿ. ಅಶೋಕ್ ಮುಂತಾದವರು ಸಂಸ್ಥೆಯ ಟ್ರಸ್ಟಿಗಳಾಗಿದ್ದು, ಆಡಳಿತ ಮಂಡಳಿಯಲ್ಲಿ ತಮ್ಮದೇ ದರ್ಬಾರು ನಡೆಯುವಂತೆ ಎಚ್ಚರ ವಹಿಸಿರುವುದು ಮುಖಕ್ಕೆ ರಾಚಿದಂತೆ ಹೊಡೆದು ಕಾಣುತ್ತದೆ.

ಈ ಕುಟುಂಬದವರದ್ದೇ ಸಿಮೆಂಟ್ ಅಂಗಡಿಯೊಂದು ಶೇಷಾದ್ರಿಪುರದಲ್ಲಿದ್ದು, ಅದರ ಮೂಲಕವೇ ತಮಗೆ ತೋಚಿದ ಬೆಲೆಯಲ್ಲಿ ದಾಸ್ತಾನು ಪೂರೈಸಿಕೊಂಡು ವ್ಯವಹಾರ ಚಾಣಾಕ್ಷತೆಯನ್ನು ಮೆರೆಯುವುದು ನಡೆದೇ ಇದೆ.

ಇಷ್ಟಕ್ಕೇ ಈ ಕುಟುಂಬದ ದುಷ್ಟಾಳಿ ಮುಗಿಯುವುದಿಲ್ಲ. ಸಂಸ್ಥೆಯ ಜಾಹಿರಾತು ನೀಡುವುದರಲ್ಲಿ ಮನಸೋ ಇಚ್ಛೆ ವ್ಯವಹಾರ ನಡೆಸುವುದು, ಲಾಭವೇ ಇಲ್ಲದ ಕ್ಯಾಂಟೀನ್ ಗುತ್ತಿಗೆ ಕೊಡಲು ಸಾವಿರಾರು ರೂಪಾಯಿಗಳನ್ನು ಜಾಹಿರಾತಿಗೆ ಪೋಲು ಮಾಡುತ್ತಾ ಅದರ ಹೆಸರಲ್ಲೂ ತಮ್ಮ ಲೆಕ್ಕ ಭರಿಸಿಕೊಳ್ಳುವ ನೀಚತನ ಮುಂದುವರಿದೇ ಇರುವುದನ್ನು ಅಸಹಾಯಕರು ಕಂಡೂ ಕಾಣದಂತೆ ಸಹಿಸಿಕೊಳ್ಳುವ ಪರಿ ಗುಲಾಮಗಿರಿಯ ಸಂಕೇತದಂತೆ ವಿಜೃಂಭಿಸುತ್ತಿದೆ.

ಮೊದಲು ಕಂದಾಯ ಮಂತ್ರಿಗಳಾಗಿದ್ದ ಹೆಚ್.ಸಿ. ಶ್ರೀಕಂಠಯ್ಯನವರನ್ನು ಕಂಡು ಸಂಸ್ಥೆಯಲ್ಲಿ ಆಗುತ್ತಿರುವ ಅನ್ಯಾಯವನ್ನು ಜೆಕೆಎಸ್ ತಂಡ ವಿವರಿಸಿತು. ಅವರು ತಕ್ಷಣ ನಗರ ಜಿಲ್ಲಾ ರಿಜಿಸ್ಟ್ರಾರ್‌ಗೆ ಪರಿಶೀಲಿಸಿ ಕ್ರಮ ಕೈಗೊಳ್ಳಲು ಸೂಚಿಸಿದರು. ಈ ತಂಡ 25 ಜನರ ಸಹಿಯೊಡನೆ ರಿಜಿಸ್ಟ್ರಾರ್‌ಗೆ ಮನವಿ ಸಲ್ಲಿಸಿ 345 ಹೊಸ ಸದಸ್ಯರ ಸೇರ್ಪಡೆಯನ್ನು ಅಕ್ರಮವೆಂದು ಆಕ್ಷೇಪ ಮಾಡಿ ದೂರಿತ್ತಿತ್ತು. ಸಂಸ್ಥೆಯ ಹೆಸರು ಟ್ರಸ್ಟ್ ಎಂಬುದಾಗಿ ಬದಲಾಯಿಸಿದ್ದರೂ ಅಸೋಸಿಯೇಷನ್ ಹೆಸರು ವಿಸರ್ಜನೆಯೂ ಆಗಿಬಿಡುವ ಸಂಗತಿ ಪತ್ತೆ ಹಚ್ಚಿ ಉಲ್ಲೇಖಿಸಲಾಯಿತು. ಆಗ 1980 ರಲ್ಲಿ ಇದ್ದದ್ದು ಕೇವಲ 710 ಸದಸ್ಯರ ಸಂಖ್ಯೆ. ಟ್ರಸ್ಟ್ ಆಗಿ ಪರಿವರ್ತಿಸಿದ ಮೇಲೆ ಒಟ್ಟು ಸದಸ್ಯರ ಸಂಖ್ಯೆ 2001 ರ ಹೊತ್ತಿಗೆ 1250 ರಷ್ಟಾಯಿತು. ಆದರೆ ಅಷ್ಟು ಸದಸ್ಯರ ಸೇರ್ಪಡೆಗೆ ಸಂಸ್ಥೆಯ ನಿಯಮಾವಳಿಯಂತೆ ಒಪ್ಪಿಗೆ ಪಡೆಯಲಾಗಿದ್ದುದೇನೋ ನಿಜವಾದರೂ 2003ರ ಜೂನ್‌ನಲ್ಲಿ ಅಕ್ರಮ ಸಭೆ ನಡೆಸಿ 31 ಸದಸ್ಯರ ಆಡಳಿತ ಮಂಡಳಿ ಹಾಜರಿ ತೋರಿಸಿ ಕೋರಂ ಇದೆಯೆಂದು ಘೋಷಿಸಿ ಹೊಸದಾದ 345 ಸದಸ್ಯರ ಸೇರ್ಪಡೆಯನ್ನು ಒಳಗೊಳಗೇ ಅಕ್ರಮವಾಗಿ ಮಾಡಿಕೊಂಡು ಸಂಸ್ಥೆಯ ಹಾಗೂ ಸರ್ಕಾರದ ಎಲ್ಲ ನೀತಿ ನಿಯಮಾವಳಿಯನ್ನು ಗಾಳಿಗೆ ತೂರಿ ಡಬ್ಲ್ಯೂ.ಹೆಚ್. ಗುಂಪು ಮೆರೆದಿತ್ತು.

### ಮತ್ತೊಂದು ಸಭೆಗೆ ಸೂಚನೆ

2003ರ ಜೂನ್‌ನಲ್ಲಿ ಸರ್ವ ಸದಸ್ಯರ ಸಭೆ ಕರೆದ ನಾಟಕವಾಡಿದ ಆಡಳಿತ ಮಂಡಳಿ ಬೆಳಿಗ್ಗೆ 11 ಗಂಟೆಗೆ ವಿಶೇಷ ಸಾಮಾನ್ಯ ಮಂಡಳಿ ಸಭೆ ನಡೆಸಿತು. ಮಧ್ಯಾಹ್ನ 3 ಗಂಟೆಗೆ ಸಾಮಾನ್ಯ ಮಂಡಳಿ ಸಭೆ ನಡೆಸಿ ಅದರಲ್ಲಿ ಹಾಜರಿದ್ದ 31 ಮಂದಿಯಲ್ಲಿ 10 ಮಂದಿಯ ಆಡಳಿತ ಮಂಡಳಿ ರಚಿಸಿತು. ಅದನ್ನು ಅವಿರೋಧ ಎಂದು ಘೋಷಿಸಿಕೊಂಡಿತು. ವಾಸ್ತವವಾಗಿ ಅದು ಶುದ್ಧ ಮೋಸದ ಕೃತ್ಯವಷ್ಟೇ. ಅದು ಹೊಸ 345 ಸದಸ್ಯರ ಸೇರ್ಪಡೆ ನಿಯಮಾವಳಿಯಂತೆ ನಡೆದಿಲ್ಲವಾದ್ದರಿಂದ ಮತ್ತೊಂದು ಸಾಮಾನ್ಯ ಮಂಡಳಿ ಸಭೆ ನಡೆಸಿ ಅದರಲ್ಲಿ ಅಸ್ತು ಅನ್ನಿಸಿ ತನಗೆ ಸಲ್ಲಿಸಬೇಕೆಂದು ರಿಜಿಸ್ಟ್ರಾರ್ ಸೂಚಿಸಿದ್ದರು.

ಈ ಹಿನ್ನೆಲೆಯಲ್ಲಿಯೇ ಆಡಳಿತ ನಡೆಸುತ್ತಿರುವ ಡಬ್ಲ್ಯೂ.ಹೆಚ್. ಹಾಗೂ ಕೆ.ಎಂ. ನಂಜಪ್ಪ ಗುಂಪು ಇದೇ 28-11-2004 ರಂದು ಸರ್ವ ಸದಸ್ಯರ ಮಹಾ ಸಭೆಯನ್ನು ಕರೆದಿದೆ. ಈ ಸಭೆಯಲ್ಲಿ 345 ಸದಸ್ಯರ ಅಕ್ರಮ ಸೇರ್ಪಡೆಯನ್ನು ಸಕ್ರಮಗೊಳಿಸುವ ಕುತಂತ್ರಗಾರಿಕೆಯನ್ನು ರೂಪಿಸಿಕೊಂಡಿದೆ. ಈ ಸಭೆಗೆ ಎಲ್ಲರೂ ಕಡ್ಡಾಯವಾಗಿ ಬರಬೇಕೆಂದು ಸದಸ್ಯರಿಗೆ ತಾಕೀತು ಮಾಡತೊಡಗಿದೆ. ಆದರೆ 1250 ಸದಸ್ಯರಲ್ಲಿ ಕೇವಲ 500 ಮಂದಿ ಸದಸ್ಯರಿಗೆ ಮಾತ್ರವೇ ವಿಶೇಷ ಸರ್ವ ಸದಸ್ಯರ ಮಹಾಸಭಾ ಪುಸ್ತಕವನ್ನು ತಿಳುವಳಿಕೆಗಾಗಿ ಕಳಿಸಿದೆಯಷ್ಟೇ. ಅದೂ ತನಗೆ ಬೇಕುಬೇಕಾದವರಿಗೆ ಮಾತ್ರ ಕಳಿಸಿದೆ. ಅದರೊಡನೆ ಗುರುತಿನ ಚೀಟಿಯನ್ನು ಕಡ್ಡಾಯವಾಗಿ ತರಬೇಕೆಂದು ಸೂಚಿಸಿದೆ. ಅಂದರೆ, ಈ ಸಭೆಯಲ್ಲಿ ಅಕ್ರಮ ಸದಸ್ಯರ ಸೇರ್ಪಡೆಯನ್ನು ಸಕ್ರಮಗೊಳಿಸಿಕೊಳ್ಳುವ ವ್ಯವಸ್ಥಿತ ಹುನ್ನಾರವಿರುವುದು ಸ್ಪಷ್ಟವಾಗುತ್ತದೆ. ಈ ನಡುವೆ ನ್ಯಾಯಾಲಯವು ಈ ಹೊಸ ಸದಸ್ಯರ ಸೇರ್ಪಡೆಯನ್ನು ಆಕ್ಷೇಪಿಸಿ ತಡೆಯಾಜ್ಞೆ ನೀಡಿದೆ. ಈ ತಡೆಯಾಜ್ಞೆಯನ್ನು ತೆರವುಗೊಳಿಸುವ ಸಾಹಸದ ಕೆಲಸಕ್ಕೆ ಡಬ್ಲ್ಯೂ.ಹೆಚ್. ತಂಡ ಯುದ್ಧೋಪಾದಿಯಲ್ಲಿ ನಡೆಸುತ್ತಿದೆ.

### ಎರಡಕ್ಕೂ ಸಹಿ

ಈ ಪ್ರತಿಷ್ಠಿತ ಸಂಸ್ಥೆ ಮೊದಲು ಅಸೋಸಿಯೇಷನ್ ಆಗಿತ್ತು. ಅನಂತರ ಟ್ರಸ್ಟ್ ಆಗಿ ಪರಿವರ್ತನೆಯಾಯಿತು. ಇದಕ್ಕೆಲ್ಲಾ ಟ್ರಸ್ಟ್ ಡೀಡ್ ದಾಖಲೆಗಳಿವೆ. 1944 ರಿಂದ 1980 ರವರೆಗೆ ಅಸೋಸಿಯೇಷನ್ ಆಗಿದ್ದ ಸಂಸ್ಥೆ 1980 ರಲ್ಲಿ ಟ್ರಸ್ಟ್ ಆಗಿದ್ದು, ಅಲ್ಲಿಂದ 2003 ರವರೆಗೆ ಟ್ರಸ್ಟ್ ಆಗಿಯೇ ಮುಂದುವರಿದಿದ್ದ ದಾಖಲೆಗಳೇ ಇವೆ. ಈ 24 ವರ್ಷ ಟ್ರಸ್ಟ್ ಹೆಸರಿನಲ್ಲೇ ಸಂಸ್ಥೆಯ ಎಲ್ಲ ಆಗುಹೋಗುಗಳೂ ನಡೆದುಕೊಂಡು ಬಂದಿವೆ. ಆದರೆ ತಮ್ಮ ಅನುಕೂಲಕ್ಕೆ ಬೇಕಾದಂತೆ ಈ ಸಂಸ್ಥೆಯ ಸ್ವರೂಪವನ್ನೇ ಬದಲಾಯಿಸುವ ನೀಚತನ ಮಾತ್ರ ಈ ದುರುಳ ಕಾರ್ಯಗಳಿಂದ ನಡೆಯುತ್ತಾ ಸಾಗಿದೆ. ಇದೇ ಅಧ್ಯಕ್ಷ ಕೆ.ಎಂ. ನಂಜಪ್ಪನವರು ಟ್ರಸ್ಟ್ ಪರಿವರ್ತನೆಗೆ ಸಹಿ ಮಾಡಿರುವ ಭೂಪರಾಗಿದ್ದಾರೆ. ಅದೇ ಟ್ರಸ್ಟ್ ಅನ್ನು ಮತ್ತೆ ಅಸೋಸಿಯೇಷನ್ ಆಗಿ ಪರಿವರ್ತಿಸಲು ಕೂಡಾ ದಾಖಲೆಗಳಿಗೆ ಸಹಿ ಮಾಡಿದ್ದಾರೆ.

ಇಂತಹ ಆಟಾಟೋಪಗಳು ಮಕ್ಕಳಿಗೆ ವಿದ್ಯಾದಾನ ಮಾಡುವ, ಯುವಕರನ್ನು ದೇಶದ ಸತ್ಪ್ರಜೆಗಳನ್ನಾಗಿ ರೂಪಿಸಬೇಕಾದ ಸಂಸ್ಥೆಯಲ್ಲಿ ನಡೆಯತೊಡಗಿರುವುದು ಅನಾಚಾರದ ಬೆಳವಣಿಗೆಯಲ್ಲದೆ ಬೇರೇನೂ ಅಲ್ಲ. ಈ ನೀಚತನವನ್ನು ಕೆ.ಎಂ. ನಂಜಪ್ಪನವರಂಥ ಹಿರಿಯರು ಹಾಗೂ ಅವರ ಹಿಂಬಾಲಕರೂ ಅರ್ಥೈಸಿಕೊಳ್ಳದೆ ಡಬ್ಲ್ಯೂ.ಹೆಚ್. ಗುಂಪು ಆಡಿದ ಆಟಕ್ಕೆಲ್ಲಾ ಕುಣಿಯುತ್ತಾ ಕೊಡುತ್ತಾ ಹೋಗುತ್ತಿರುವುದು ಸಂಸ್ಥೆಯ ಇತರೆ ಸದಸ್ಯರು ಮತ್ತು ಸಿಬ್ಬಂದಿಯನ್ನು ದಿಗ್ಭ್ರಮೆಗೊಳಿಸಿದೆ. ಇವರೂ ಸಂಸ್ಥೆಯ ದುರ್ಲಾಭವನ್ನು ಮಾಡಿಕೊಳ್ಳಲು ಒಳಗೊಳಗೇ ಸಂಚು ರೂಪಿಸಿದ್ದಾರೆಂಬ ಭಾವನೆ ಎಲ್ಲರಿಗೂ ಬರುವಂತೆ ನಂಜಪ್ಪನವರ ಪಟಾಲಂ ಕೂಡಾ ನೀಚ ಕೃತ್ಯಗಳಲ್ಲಿ ತೊಡಗಿರುವುದು ವಾಸ್ತವ ಸತ್ಯವಾಗಿದೆ.

ಇದರಲ್ಲಿ ಬೆಂಗಳೂರು ನಗರ ಜಿಲ್ಲಾ ಸಂಘಗಳ ನೊಂದಣಾಧಿಕಾರಿ ಕೂಡಾ ಶಾಮೀಲಾಗಿರುವ ವಾಸನೆ ಬಡಿಯುತ್ತಿದೆ. ಇವರು ತಮ್ಮ ಪ್ರಸ್ತಾವನೆಯಲ್ಲಿ 'ದಿನಾಂಕ 18-06-2003 ರಂದು ಶ್ರೀ ಮಾರುತಿ ಅವರು ದೂರು ಸಲ್ಲಿಸಿ, ಕಾನೂನು ಬಾಹಿರವಾಗಿ 345 ಜನ ಆಜೀವ ಸದಸ್ಯರನ್ನು ತೆಗೆದುಕೊಂಡಿರುವುದಾಗಿ ತಿಳಿಸಿ, ಆಜೀವ ಸದಸ್ಯರನ್ನು ಕೂಡಲೇ ಅಮಾನತ್ತಿನಲ್ಲಿಡಲು ಕೋರಿದ್ದಾರೆ. ಈ ಬಗ್ಗೆ ದಿನಾಂಕ 26-06-2003 ರಂದು ನೋಟೀಸ್ ಜಾರಿ ಮಾಡಲಾಗಿದೆ' ಎಂದು ಉಲ್ಲೇಖಿಸಿದ್ದಾರೆ.

### ರಿಜಿಸ್ಟ್ರಾರ್‌ನಿಂದ ಸ್ಪಷ್ಟವಿಲ್ಲ

ಹಾಗೇ ಕ್ರಮಸಂಖ್ಯೆ 2 (2) ರಲ್ಲಿ '1980 ರಲ್ಲಿ ಸಂಘದಿಂದ ಟ್ರಸ್ಟ್ ಪ್ರಾರಂಭವಾಗಿ' ಎಂದು ದಾಖಲಿಸಿ ಅದನ್ನು ಸರಿಯಾಗಿ ಸ್ಪಷ್ಟಪಡಿಸದೆ ಅದೇ ಪ್ಯಾರಾದಲ್ಲಿ 'ಆದರೆ ಸಂಘವನ್ನು ಟ್ರಸ್ಟ್ ಆಗಿ ಪರಿವರ್ತಿಸಿಲ್ಲವೆಂದು ತಿಳಿಸಿದ್ದಾರೆ. ಪ್ರತಿವರ್ಷ ಸರ್ವ ಸದಸ್ಯರ ಸಭೆ ನಡೆಸಲಾಗಿದೆ ಹಾಗೂ ಲೆಕ್ಕ ಪತ್ರ ಅನುಮೋದನೆ ಪಡೆದಿರುವುದಾಗಿ ತಿಳಿಸಿದ್ದಾರೆ' ಎಂದು ತಾನೇ ದಾಖಲಿಸಿದ್ದಾರೆ.

ಕಡೆಗೆ ತಮ್ಮ ಆದೇಶದಲ್ಲಿ ಕ್ರ.ಸಂ. 2 ರಲ್ಲಿ '345 ಜನ ಆಜೀವ ಸದಸ್ಯರನ್ನು ತೆಗೆದುಕೊಂಡಿರುವ ಬಗ್ಗೆ ಸರ್ವ ಸದಸ್ಯರ ಸಭೆಯಲ್ಲಿ ಮತ್ತೊಮ್ಮೆ ಮಂಡಿಸುವುದು. ಅಲ್ಲಿಯವರೆಗೆ ಇವರುಗಳ ಸದಸ್ಯತ್ವವನ್ನು ತಡೆಹಿಡಿಯಲು ಆದೇಶಿಸಿದೆ' ಅಂದಿದ್ದಾರೆ.

ಅದೇ ಆದೇಶ ಕ್ರ.ಸಂ. 3 ರಲ್ಲಿ 'ಟ್ರಸ್ಟ್ ಆಗಿ ಪರಿವರ್ತಿಸಿಲ್ಲವೆಂದು ಹೇಳಿರುವುದರಿಂದ ಸದರಿ ಟ್ರಸ್ಟ್ ಆಗಿ ಕಾರ್ಯ ನಿರ್ವಹಿಸುವ ಸಂಸ್ಥೆಯ ದಾಖಲೆಗಳು ಈ ರಿಜಿಸ್ಟ್ರಾರ್ ಕಣ್ಣಿಗೆ ಕಾಣದೇ ಹೋದದ್ದು ಹೇಗೆ? ಹಿಂದಿನ ಎಲ್ಲಾ ಸಭೆಗಳಲ್ಲಿ 'ಹೊಸ ಸದಸ್ಯರ ಸೇರ್ಪಡೆ ಅಗತ್ಯವಿಲ್ಲ, ಸಂಸ್ಥೆಯ ಆರ್ಥಿಕ ಸ್ಥಿತಿ ಚೆನ್ನಾಗಿದೆ' ಎಂದು ತೀರ್ಮಾನಿಸಿದ್ದರೂ, ಈ ಹೊಸದಾದ 345 ಸದಸ್ಯರ ಅಕ್ರಮ ಸದಸ್ಯರ ಸೇರ್ಪಡೆಯನ್ನು ವಜಾಗೊಳಿಸುವ ಬದಲು ಮತ್ತೆ ಸರ್ವ ಸದಸ್ಯರ ಮಹಾಸಭೆ ಕರೆದು ಅದಕ್ಕೆ ಅನುಮತಿ ಪಡೆಯುವಂತೆ ಉದಾರತೆ ಆದೇಶ ನೀಡಿರುವುದರ ಹಿಂದೆ ಭಾರೀ ಅಕ್ರಮಗಳೇ ನಡೆದಿರಬಹುದಾದ ಸಾಧ್ಯತೆಯನ್ನು ಸಂಸ್ಥೆಯ ಕಂಬ ಕಂಬಗಳೂ ಗೊಣಗಾಡಿಕೊಳ್ಳುತ್ತಿವೆ.

ಇಂತಹ ಕಪಟತನ, ದುರುಳತನ, ಪಿತೂರಿಗಳು ಒಂದು ವಿದ್ಯಾಸಂಸ್ಥೆಯನ್ನು ಎತ್ತ ಒಯ್ಯಬಲ್ಲವೆಂಬುದನ್ನು ಯೋಚಿಸಿದಾಗ ಯಾರಿಗಾದರೂ ನಡುಕವಾಗದೇ ಇರದು. ಸರ್ಕಾರ ಹಾಗೂ ರಿಜಿಸ್ಟ್ರಾರ್ ಈ ವಿಚಾರದಲ್ಲಿ ನಿಷ್ಠುರ ಕ್ರಮಕ್ಕೆ ಮುಂದಾಗಬೇಕೇ ವಿನಃ ತಾನೂ ಚಿಕ್ಕದನ್ನು ನೆಕ್ಕುವ ನೀಚತನ ಪ್ರದರ್ಶಿಸಿದರೆ ಸಂಸ್ಥೆಯ ಭವಿಷ್ಯ ಏನಾದೀತು? ಅಲ್ಲಿ ತಯಾರಾಗುವ ಭಾರೀ ಪ್ರಜೆಗಳು ಅದ್ಯಾವ ಮನೋಸ್ಥಿತಿಯನ್ನು ರೂಢಿಸಿಕೊಂಡಾರು?

## ಆರುಳೋ ಮರುಳೋ ಅಧ್ಯಕ್ಷರ ಹೆಸರಲ್ಲಿ ಎಲ್ಲಾ ಮಾಯೆಯೋ!



ಅಲಂಕಾರ ಮೂರ್ತಿಯೊಂದನ್ನು ಸಿಂಹಾಸನದಲ್ಲಿ ಕೂರಿಸಿ ಬಾಲಬಡುಕರು ತಮಗೆ ಬೇಕಾದ್ದೆಲ್ಲಾ ಮಾಡಿಕೊಳ್ಳುವ ಕೆಲಸ ಎಷ್ಟೊಂದು ಮಜವಾಗಿರುತ್ತೆ!

ಹಾಗೇ ಆಗಿದೆ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಕಥೆಯೂ. ಒಂದೇ ಕುಟುಂಬದ ಹಿಡಿತಕ್ಕೆ ಇಂಥದೊಂದು ಬೃಹತ್ ಸಂಸ್ಥೆಯನ್ನು ತೆಗೆದುಕೊಂಡು ನಿರಂತರವಾಗಿ ಆಡಳಿತ ನಡೆಸಿಕೊಂಡು ಹೋಗುವ ಹುನ್ನಾರಕ್ಕೆ ಭರ್ಜರಿ ಅಸ್ತ್ರವಾಗಿ ಸಿಕ್ಕಿರುವವರು ವಯೋವೃದ್ಧ ಕೆ.ಎಂ. ನಂಜಪ್ಪನವರು.

ಬೆಂಗಳೂರಿನ ಹಿರಿಯ ನಾಗರೀಕರೂ, ಮಾಜಿ ಮೇಯರ್‌ರೂ ಆದ ನಂಜಪ್ಪನವರಿಗೀಗ 95 ವರ್ಷಗಳಾಗಿವೆ. ಕಣ್ಣು ಸರಿಯಾಗಿ ಕಾಣಿಸದು. ಸಹಿ ಮಾಡಲು ಕೂಡಾ ಕೈ ಸಲೀಸಾಗಿ ಕೆಲಸ ಮಾಡದು. ಇಂತೊಬ್ಬ ಗೌರವಾನ್ವಿತ ಹಿರಿಯರನ್ನು ಮುಂದಿಟ್ಟುಕೊಂಡು ಸಂಸ್ಥೆಯಲ್ಲಿ ಅಲ್ಲೋಲಕಲ್ಲೋಲ ಮಾಡಲು ಹೊರಟಿರುವವರ ಅಕ್ರಮಗಳ ಬಗ್ಗೆ ಇವರು ಮಾತಾಡುವ ಎದೆಗಾರಿಕೆಯನ್ನೇ ಹೊಂದಿಲ್ಲದಿರುವುದು ದುರದೃಷ್ಟಕರ.

ಈ ವಯೋವೃದ್ಧರ ಹುಟ್ಟುಹಬ್ಬವನ್ನು ಸಂಸ್ಥೆಯ ಹೆಸರಲ್ಲಿ ಆಡಳಿತ ಹಿಡಿದವರು ಪ್ರತೀ ವರ್ಷ ಆಚರಿಸುತ್ತಲೇ ಬರುತ್ತಿದ್ದಾರೆ. ಅವರು 'ಬದುಕಿದ್ದಾರೆ' ಎಂಬ ಸಂತೋಷಕ್ಕೆ ಈ ಹಬ್ಬವನ್ನು ಆಚರಿಸುವಂತೆ ತಮಾಷೆಯಾಗಿ ಕಾಣುತ್ತದೆ.

ಸಂಸ್ಥೆಯಲ್ಲಿ 345 ಸದಸ್ಯರ ಅಕ್ರಮ ಸೇರ್ಪಡೆ, ಏಕ ಕುಟುಂಬದ ಆಡಳಿತದ ಕಪಿಮುಷ್ಟಿ, ಪ್ರಿನ್ಸಿಪಾಲರ ಬದಲಾವಣೆ, ಫಲಿತಾಂಶ ಇಳಿಮುಖ, ವಿವಿಧ ಸಮಿತಿಗಳಲ್ಲಿ ಅಕ್ರಮ ಹಣ ಗಳಿಕೆ ಚಾಳಿ ಮುಂತಾದವೆಲ್ಲಾ ನಡೆಯುತ್ತಿದ್ದರೂ ಈ ಹಿರಿಯ ಜೀವ ಅದರ ಬಗ್ಗೆ ದುಸರಾ ಮಾತಾಡದೆ, ಯಾರನ್ನೂ ತರಾಟೆಗೆ ತೆಗೆದುಕೊಳ್ಳದೆ ಎಲ್ಲಕ್ಕೂ 'ಅಸ್ತು' ಎನ್ನುತ್ತಿರುವುದು ವಿಚಿತ್ರವಾದ ಸಂಗತಿಯಾಗುತ್ತಿದೆ.

# ಸೇವೆಯಲ್ಲೇ ಸಾರ್ಥಕತೆ ಕಾಣುವ ಡಬ್ಲ್ಯೂ.ಪಿ. ಕೃಷ್ಣ

ಸೀತಾಶ್ರೀ.ಎಸ್.

ವೃತ್ತಿ, ಜೀವನೋಪಾಯ ಹಾಗೂ ವೈಯಕ್ತಿಕ ಕಾರ್ಯಗಳಲ್ಲದೆ ಕಿಂಚಿತ್ತಾದರೂ ಸಮಾಜಕ್ಕೆ ಸೇವೆ ಸಲ್ಲಿಸಬೇಕು. ಆಗಲೇ ನಮ್ಮ ಬದುಕಿಗೊಂದು ಅರ್ಥ ಎನ್ನುತ್ತಾರೆ ಶೇಷಾದ್ರಿ ಪುರಂ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ಹಾಗೂ ಸಮಾಜ ಸೇವಕ ಪೂಡೇ. ಪಿ.ಕೃಷ್ಣ ಸೇವೆಗಾಗಿ ಬಾಳು ಎಂಬ ತತ್ವವನ್ನು ಅಳವಡಿಸಿಕೊಂಡಿರುವ ಕೃಷ್ಣ ಸಮಾಜಕ್ಕಾಗಿ ಸಲ್ಲಿಸುತ್ತಿರುವ ಸೇವೆಯನ್ನು ಗುರುತಿಸಿ ರಾಜ್ಯ ಸರ್ಕಾರ ಈ ಸಾಲಿನ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ.

**ಕುಟುಂಬದ ಹಿನ್ನೆಲೆ :** ಡಬ್ಲ್ಯೂ.ಪಿ. ಕೃಷ್ಣ ಸಮಾಜ ಸೇವೆಗಾಗಿ ಬದುಕನ್ನೇ ಅರ್ಪಿಸಿದ ಅಜ್ಜ ಹಾಗೂ ತಂದೆಯ ಹಾದಿಯನ್ನೇ ಹಿಡಿದಿದ್ದಾರೆ. ತಂದೆ ಸ್ವಾತಂತ್ರ್ಯ ಹೋರಾಟಗಾರ ಡಬ್ಲ್ಯೂ. ಎಚ್.ಪುಟ್ಟಯ್ಯ, 1942ರ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಪಾಲ್ಗೊಂಡಿದ್ದು ಕಷ್ಟದಲ್ಲಿರುವವರ ಏಳಿಗೆಗಾಗಿ ಶ್ರಮಿಸುತ್ತಿರುವ ಪೂಡೇ ಸಂಸ್ಥೆಯ ಸಂಸ್ಥಾಪಕರು.

ಅಜ್ಜ ಡಬ್ಲ್ಯೂ.ಪಿ.ಹನುಮಂತಪ್ಪನವರು ಹಳೆ ಮೈಸೂರು ಸಂಸ್ಥಾನದ ಪ್ರಜಾ ಪ್ರತಿನಿಧಿ ಸಭೆಯ ಸದಸ್ಯರು ಹಾಗೂ ಬೆಂಗಳೂರಿನ ಮಹಾಪೌರರಾಗಿದ್ದರು. ಬ್ರಹ್ಮಸಮಾಜದ ಆಂದೋಲನದಲ್ಲಿ ಸಕ್ರಿಯವಾಗಿ



ಪಾಲ್ಗೊಂಡಿದ್ದ ಹನುಮಂತಪ್ಪ ಗಾಂಧಿ ತತ್ವಗಳಿಗೆ ಮಾರುಹೋಗಿದ್ದರು.

**ಜ್ಯಾಕ್ ಆಫ್ ಆಲ್ :** ಕೃಷ್ಣ, ಬೆಂಗಳೂರಿನಲ್ಲಿ ಹುಟ್ಟಿದವರಾದರೂ, ಪ್ರಾಥಮಿಕ ವಿದ್ಯಾಭ್ಯಾಸವನ್ನು ಮೈಸೂರಿನ ರಾಮಕೃಷ್ಣ ಆಶ್ರಮದಲ್ಲಿ ಮುಗಿಸಿದರು. ಮೆಕ್ಯಾನಿಕಲ್ ಇಂಜಿನಿಯರಿಂಗ್, ಇಂಡಸ್ಟ್ರಿಯಲ್ ಇಂಜಿನಿಯರ್, ನ್ಯಾಯಶಾಸ್ತ್ರ ಬಿಸಿನೆಸ್ ಅಡಿಮಿನಿಸ್ಟ್ರೇಷನ್ ವಿಷಯಗಳಲ್ಲಿ ಪದವಿ ಪಡೆದಿದ್ದಾರೆ.

1986 ರಿಂದ 1988 ರವರೆಗೆ ಬಿಎಂಎಸ್ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದರು. ಚಾರ್ಟರ್ಡ್ ಇಂಜಿನಿಯರ್, ಯಂತ್ರೋದ್ಯಮದ ಸರ್ಕಾರಿ ಮೌಲ್ಯ ಮಾಪಕರಾಗಿದ್ದು ಮೈಸೂರು ಸ್ಟೋನ್ ವೇರ್ ಪೈಪ್ಸ್ ಅಂಡ್ ಪಾಟರೀಸ್ ಕಂಪನಿಯ ನಿರ್ದೇಶಕರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ.

ಚಿಕ್ಕಂದಿನಲ್ಲೇ ಸಮಾಜ ಸೇವೆಯತ್ತ ಆಸಕ್ತಿ ಬೆಳಸಿಕೊಂಡ ಕೃಷ್ಣ, ಭಾರತೀಯ ಮೌಲ್ಯ ಮಾಪಕರ ಸಂಸ್ಥೆಯ ಸಹ ಕಾರ್ಯದರ್ಶಿಯಾಗಿಯೂ ಮೆಚ್ಚುಗೆ ಗಳಿಸಿದ್ದಾರೆ, 1992ರಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿಗೆ ಕಾಲಿಟ್ಟ ಕೃಷ್ಣ ಸದ್ಯ ಪ್ರಧಾನ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುತ್ತಿದ್ದು, ಹಲವಾರು ಮಂದಿ ಯುವಕ-ಯುವತಿಯರಿಗೆ ಮಾದರಿಯಾಗಿದ್ದಾರೆ. ಇವರ ಶೈಕ್ಷಣಿಕ ಸಾಧನೆಗಳನ್ನು ಗಮನಿಸಿದ ಬೆಂಗಳೂರು ಮಹಾನಗರ ಪಾಲಿಕೆ 2002 ರಲ್ಲಿ ಕೆಂಪೇಗೌಡ ಪ್ರಶಸ್ತಿ ನೀಡಿ ಗೌರವಿಸಿತು.

**ಕಾರ್ಯಗಳಲ್ಲಿಯೂ ಸೈ :** ಮತ್ತೊಬ್ಬರ ಒಳಿತಿಗಾಗಿ ಬಾಳುವಲ್ಲಿ ಸಾರ್ಥಕತೆಯನ್ನು ಕಾಣುವ ಕೃಷ್ಣ ಹಲವಾರು ಸೇವಾ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿ ಜನರ ವಿಶ್ವಾಸ ಗಳಿಸಿದ್ದಾರೆ. ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ಖಜಾಂಚಿಯಾಗಿ, ಅಲಸೂರಿನಲ್ಲಿರುವ ವಿಕಲಾಂಗ ಯೋಧರ ರೆಡ್ ಕ್ರಾಸ್ ಹೋಮ್‌ನ ಅಭಿವೃದ್ಧಿ ಸಮಿತಿ ಸದಸ್ಯರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇದಲ್ಲದೆ, ಭಾರತ ಸೇವಾ ದಳದ ಸಮಿತಿ ಸದಸ್ಯರಾಗಿ ಮತ್ತು ಗಾಂಧಿ ಶಾಂತಿ ಪ್ರತಿಷ್ಠಾನದ ಖಜಾಂಚಿ ಯಾಗಿದ್ದಾರೆ. ಕೃಷ್ಣ ಅವರ ನಿರಂತರ ಸೇವೆಯನ್ನು ಮೆಚ್ಚಿದ ಶ್ರೀ ವಿವೇಕಾನಂದ ಕಲಾ ಕೇಂದ್ರ 2000 ನೇ ಸಾಲಿನಲ್ಲಿ ಸೇವಾಶ್ರೀ ಪ್ರಶಸ್ತಿ ನೀಡಿದೆ.

**ಸ್ಫೂರ್ತಿ :** ತಮ್ಮ ಇಷ್ಟೆಲ್ಲಾ ಸೇವಾ ಕಾರ್ಯಕ್ಕೆ ರಾಮಕೃಷ್ಣ ಆಶ್ರಮದಲ್ಲಿ ಸಿಕ್ಕಿದ ಮಾರ್ಗದರ್ಶನವೇ ಕಾರಣ ಎನ್ನುವ ಕೃಷ್ಣ, ಅಂದೇ ಸ್ವಾಮಿ ವಿವೇಕಾನಂದರ ಆದರ್ಶ ತತ್ವಗಳನ್ನು ಅಳವಡಿಸಿಕೊಂಡರಂತೆ. ಮತ್ತೊಬ್ಬರ ಒಳಿತಿಗಾಗಿ ಬಾಳುವವನು ಅವನಾಗಿರುತ್ತಾನೆ. ಉಳಿದವರು ಬದುಕಿಯೂ ಸತ್ತಂತೆ ಎಂಬ ವಿವೇಕಾನಂದರ ದಾರಿಯನ್ನೇ ಆರಿಸಿಕೊಂಡಿದ್ದಾರೆ. ಆಶ್ರಮದಲ್ಲಿ ದೊರೆತ ಶಿಕ್ಷಣದ ಪ್ರತಿ ಬಿಂಬವೇ ನನ್ನ ಇಂದಿನ ಬದುಕು ಎಂದು ಕೃಷ್ಣ ಹೆಮ್ಮೆಯಿಂದ ಹೇಳುತ್ತಾರೆ.

ಪ್ರತಿಯೊಬ್ಬ ಯಶಸ್ವಿ ಪುರುಷನ ಹಿಂದೆ ಮಹಿಳೆಯ ಪಾತ್ರವಿರುತ್ತದೆ ಎನ್ನುವ ಮಾತು ಕೃಷ್ಣ ಅವರ ಜೀವನದಲ್ಲೂ ನೂರರಷ್ಟು ಸತ್ಯ. ತಾಯಿ ದೊಡ್ಡಮ್ಮಯ್ಯ ಕೃಷ್ಣರಿಗೆ ಬಹು ದೊಡ್ಡ ಸ್ಫೂರ್ತಿ.

ಈಗ ಪತ್ನಿ ಸವಿತಾ ಬೆನ್ನೆಲುಬಾಗಿ ನಿಂತಿದ್ದಾರೆ. ಈಕೆಯೂ ಕೂಡ ಸಮಾಜ ಸೇವೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಬಡ ಮಕ್ಕಳಿಗೆಂದೇ ಸ್ಥಾಪಿಸಲ್ಪಟ್ಟಿರುವ ಶಾರದಾ ವಿದ್ಯಾಪೀಠದಲ್ಲಿ ಉಪನ್ಯಾಸಕಿಯಾಗಿ ಮಕ್ಕಳಿಗೆ ವಿದ್ಯಾದಾನ ಮಾಡುತ್ತಿದ್ದಾರೆ.

ಬರೀ ಕೆಟ್ಟದ್ದೇ ಕಾಣ ಸಿಗುವ ಇಂದಿನ ಸಮಾಜದಲ್ಲಿ ಕೃಷ್ಣ ಅವರ ಸೇವೆ ಅನುಕರಣೀಯ.

# ‘ಮಕ್ಕಳಲ್ಲಿ ಉಳಿತಾಯ ಮನೋಭಾವ ಬೆಳೆಸಿ’

ಬೆಂಗಳೂರು, ಸೆ. 20- ಶಾಲಾ ಮಕ್ಕಳಲ್ಲಿ ಉಳಿತಾಯದ ಮನೋಭಾವನೆ ಬೆಳೆಸುವ ಉದ್ದೇಶದಿಂದ 1972ರಲ್ಲಿ ಪ್ರಾರಂಭವಾದ ಸಂಚಾಯಿಕ ಬ್ಯಾಂಕ್‌ನ ಮೂವತ್ತನೇ ವಾರ್ಷಿಕ ಸಮಾರಂಭ ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಇತ್ತೀಚೆಗೆ ಜರುಗಿತು.



ರಾಷ್ಟ್ರೀಯ ಉಳಿತಾಯ ಸಂಸ್ಥೆ ಆಯೋಜಿಸಿದ್ದ ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ಎಸ್.ಎಂ. ನಂಜಪ್ಪ ವಹಿಸಿದ್ದರು.

ರಾಜ್ಯದಲ್ಲಿ 1,300 ಸಂಚಾಯಿಕ ಬ್ಯಾಂಕ್‌ಗಳಿದ್ದು, 5,98,000 ಶಾಲಾ ಮಕ್ಕಳು ಉಳಿತಾಯ ಮಾಡುತ್ತಿದ್ದಾರೆ. ಈ ಉಳಿತಾಯ ಮಕ್ಕಳಿಗೆ ಮೀಸಲಾಗಿದೆ. ಮಕ್ಕಳಿಗೆ ಚಿಕ್ಕಂದಿನಿಂದಲೇ ಉಳಿತಾಯ ಮನೋಭಾವ ಬೆಳೆಸಬೇಕು. ಹಾಗೆ ಮಾಡಿದರೆ ಮಕ್ಕಳ ಭವಿಷ್ಯಕ್ಕೆ ಒಳ್ಳೆಯದಾಗುತ್ತದೆ ಎಂದು ನಂಜಪ್ಪ ಅಭಿಪ್ರಾಯಪಟ್ಟರು.

ಇದೇ ಸಂದರ್ಭದಲ್ಲಿ ಹೆಚ್ಚು ಉಳಿತಾಯ ಮಾಡಿದ ಮಕ್ಕಳಿಗೆ ಬಹುಮಾನ ವಿತರಿಸಲಾಯಿತು. ಉಳಿತಾಯಕ್ಕೆ ಸಹಕರಿಸಿದ ಶಾಲಾ ಸಿಬ್ಬಂದಿ ಬಿ.ಎಸ್. ಸುನಂದಮ್ಮ ಮತ್ತು ಉಷಾರವರನ್ನು ಸನ್ಮಾನಿಸಲಾಯಿತು. ಅತಿಥಿಗಳಾಗಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ, ರಾಷ್ಟ್ರೀಯ ಉಳಿತಾಯ ಸಂಸ್ಥೆಯ ನಿರ್ದೇಶಕ ವಿ.ಸಿ.ಬಿ. ನಾಯಕ್, ಉಪ ನಿರ್ದೇಶಕ ಕೆ. ಎನ್. ರಾಮಸ್ವಾಮಿ, ಸಹಾಯಕ ಕಾರ್ಯದರ್ಶಿ ಆರ್. ಕೃಷ್ಣ ಹಾಜರಿದ್ದರು.

ಪ್ರಜಾವಾಣಿ, ಗುರುವಾರ 9ನೇ ಸೆಪ್ಟೆಂಬರ್ 2004 ಪುಟ 3

## ರಕ್ತದಾನ ಶಿಬಿರ

ಯಲಹಂಕ, ಸೆ. 8– ರಕ್ತದಾನದ ಮಹತ್ವವನ್ನು ಅರಿತು ವಿದ್ಯಾರ್ಥಿಗಳು ರಕ್ತದಾನ ಮಾಡಲು ಮುಂದಾಗಬೇಕೆಂದು ಶೇಷಾದ್ರಿಪುರಂ ಎಜುಕೇಷನ್ ಟ್ರಸ್ಟ್‌ನ ಅಧ್ಯಕ್ಷ ಕೆ.ಎಂ. ನಂಜಪ್ಪ ಹೇಳಿದರು.

ಲಯನ್ಸ್ ಕ್ಲಬ್ ಆಫ್ ಬೆಂಗಳೂರ ವಿಜಯನಗರ ಹಾಗೂ ಭಾರತೀಯ ರೆಡ್‌ಕ್ರಾಸ್ ಸೊಸೈಟಿ ಇವರ ಸಹಯೋಗದೊಂದಿಗೆ ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮದರ್ಜೆ ಕಾಲೇಜಿನಲ್ಲಿ ಮಂಗಳವಾರ ಏರ್ಪಡಿಸಿದ್ದ ರಕ್ತದಾನ ಶಿಬಿರ ಉದ್ಘಾಟಿಸಿ ಅವರು ಮಾತನಾಡಿದರು.

ರಾಜು ಚಂದ್ರಶೇಖರ್ ಮಾತನಾಡಿ ರಕ್ತದಾನದ ಬಗ್ಗೆ ಜನರಲ್ಲಿ ಇರುವ ತಪ್ಪು ಕಲ್ಪನೆಗಳನ್ನು ಹೋಗಲಾಡಿಸಿ ರಕ್ತದಾನ ಮಾಡುವುದರ ಮೂಲಕ ಇನ್ನೊಬ್ಬರ ಜೀವನವನ್ನು ಹೇಗೆ ಉಳಿಸಬಹುದು ಎಂಬುದನ್ನು ಉದಾಹರಣೆಗಳ ಸಹಿತ ವಿವರಿಸಿದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ ಅಧ್ಯಕ್ಷತೆ ವಹಿಸಿದ್ದರು.

ಇದೇ ಸಂದರ್ಭದಲ್ಲಿ ನಗರದಲ್ಲಿ ಇತ್ತೀಚೆಗೆ ನಡೆದ 55 ನೇ ಜಿನಿವಾ ಸಮಾವೇಶದಲ್ಲಿ ಭಾಗವಹಿಸಿದ್ದ ವಿದ್ಯಾರ್ಥಿಗಳಿಗೆ ಲಯನ್ಸ್‌ನ ಅಧ್ಯಕ್ಷ ಡಬ್ಲ್ಯು.ಎಚ್. ದೇವಕುಮಾರ್ ಹಾಗೂ ಭಾರತೀಯ ರೆಡ್‌ಕ್ರಾಸ್ ಸೊಸೈಟಿ, ಪ್ರಧಾನ ಕಾರ್ಯದರ್ಶಿ ಡಾ. ಎಸ್.ಜಿ. ನಾರಾಯಣ ಅವರು ಪ್ರಮಾಣ ಪತ್ರ ವಿತರಿಸಿದರು.

ಸಮಾರಂಭದಲ್ಲಿ ಶೇಷಾದ್ರಿಪುರಂ ಎಜುಕೇಷನ್ ಟ್ರಸ್ಟ್‌ನ ಸಹಕಾರ್ಯದರ್ಶಿ ಆರ್. ಕೃಷ್ಣ, ಲಯನ್ಸ್‌ನ ಕೆ. ವೆಂಕಟೇಶಮೂರ್ತಿ, ಕೆ.ಎಲ್. ಸುಬ್ರಮಣ್ಯಂ, ವೆಂಕಟರಾಮನ್ ಭಾಗವಹಿಸಿದ್ದರು.

ಪ್ರಾಂಶುಪಾಲ ಡಾ. ಎಂ. ಪ್ರಕಾಶ್ ಸ್ವಾಗತಿಸಿದರು. ರಾಷ್ಟ್ರೀಯ ಸೇವಾ ಯೋಜನೆ ಕಾರ್ಯಕ್ರಮ ಅಧಿಕಾರಿ ಎಚ್.ವಿ. ಶಿವಕುಮಾರ್ ವಂದಿಸಿದರು. ಇಂಗ್ಲಿಷ್ ಉಪನ್ಯಾಸಕ ಜೆ.ಬಿ. ಜನಾರ್ದನ ಕಾರ್ಯಕ್ರಮ ನಿರೂಪಿಸಿದರು.

ಶಿಬಿರದಲ್ಲಿ 150 ವಿದ್ಯಾರ್ಥಿಗಳು ಸ್ವಇಚ್ಛೆಯಿಂದ ರಕ್ತದಾನ ಮಾಡಿದರು.

ವಿಜಯ ಕರ್ನಾಟಕ
ಶುಕ್ರವಾರ 19 ನವೆಂಬರ್ 2004

## ಗುಲ್ಬರ್ಗ

* ಬೆಳಗ್ಗೆ 9.30: ಕನ್ನಡ ಕಾನ್ವೆಂಟ್ ಶಾಲೆಯಲ್ಲಿ ಜಿಲ್ಲಾ ಮಟ್ಟದ ವಿಜ್ಞಾನ ಪ್ರದರ್ಶನ.

* ಬೆಳಗ್ಗೆ 10: ವೀರಶೈವ ಕಲ್ಯಾಣ ಮಂಟಪದಲ್ಲಿ ಸಂಯುಕ್ತ ಜನತಾ ದಳದ ಕಾರ್ಯಕರ್ತರ ಸಮಾವೇಶ. ಉದ್ಘಾಟಕರು: ಜಾರ್ಜ್ ಫರ್ನಾಂಡಿಸ್, ಅಧ್ಯಕ್ಷತೆ: ಬಿ.ಸೋಮಶೇಖರ, ಅತಿಥಿಗಳು: ಜೆ.ಸಿ.ಮಧುಸ್ವಾಮಿ, ಎಂ.ಪಿ.ನಾಡಗೌಡ, ಬಸರ ವಾಜ ಬೊಮ್ಮಾಯಿ, ಸಿ.ವೀರಣ್ಣ, ಎಚ್.ಆಂಜನೇಯ, ಎಂ.ಕೆ.ನಾಗಮಣಿ ನಾಗೇಗೌಡ, ಬಿ.ಶ್ರೀಪತಿರಾವ್, ಬಸವರಾಜ ಇಂಗಿನ, ವಾಸೀಮ್ ಮಲ್ಲಿಕ ಇಂಗಳಗಿ, ಮಲ್ಲಿಕಾರ್ಜುನ ಅಕ್ಕಿ, ಭೀಮಪ್ಪ ಸರಿಕಾರ.

* ಬೆಳಗ್ಗೆ 10.30: ಮಿನಿ ವಿಧಾನ ಸೌಧ ರೂ.ನಂ. 28ರಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಪ್ರತಿನಿಧಿಗಳಿಗೆ ಮಕ್ಕಳ ಹಕ್ಕುಗಳ ಒಡಂಬಡಿಕೆ ಕುರಿತು ಕಾರ್ಯಾಗಾರ.

* ಬೆಳಗ್ಗೆ 11.00: ಸಂಗಮೇಶ್ವರ ಸಭಾಗೃಹದಲ್ಲಿ ಅಂಗವಿಕಲರಿಗೆ ಸಾಧನೆ ಸಲಕರಣೆಗಳ ವಿತರಣಾ ಸಮಾರಂಭ. ಉದ್ಘಾಟಕರು: ಇಕ್ಬಾಲ್ ಅಹ್ಮದ್ ಸರಡಗಿ, ಅಧ್ಯಕ್ಷತೆ: ಚಂದ್ರಶೇಖರ ಪಾಟೀಲ್ ರೇವೂರ, ಸಲಕರಣರ ವಿತರಣೆ: ಡಾ.ಡಿ.ಎಂ.ನಂಜುಡಪ್ಪ, ಮುಖ್ಯ ಅತಿಥಿಗಳು: ಶೋಭಾ ದಿಗಂಬರ

## ಎಲ್ಲಿ ಏನು?

**19-11-2004 ಶುಕ್ರವಾರ**

ಬೆಳಮಗಿ, ಡಬ್ಲ್ಯೂ.ಪಿ.ಕೃಷ್ಣಾ, ಡಾ.ಎನ್.ಜಿ.ನಾರಾಯಣ.

* ಮಧ್ಯಾಹ್ನ 2.00: ಸೇಂಟ್ ಮೇರಿ ಶಾಲೆಯಲ್ಲಿ ಶಾಲಾ ಶಿಕ್ಷಕರಿಗೆ ಮಕ್ಕಳ ಹಕ್ಕುಗಳ ಒಡಂಬಡಿಕೆ ಕುರಿತು ಕಾರ್ಯಾಗಾರ.

* ಸಂಜೆ 5.00: ಚಂದ್ರಶೇಖರ ಪಾಟೀಲ್ ಕ್ರೀಡಾಂಗಣದಲ್ಲಿ ಬಹುಮಾನ ವಿತರಣಾ ಸಮಾರಂಭ. ಬಹುಮಾನ ವಿತರಕರು: ಚಂದ್ರಶೇಖರ ಪಾಟೀಲ್ ರೇವೂರ.

* ಸಂಜೆ 5.30: ಸಂಗಮೇಶ್ವರ ಸಭಾಗೃಹದಲ್ಲಿ ಮೇಘಮಲ್ಹಾರ್ ಪ್ರಶಸ್ತಿ ಪ್ರದಾನ ಸಮಾರಂಭ. ಉದ್ಘಾಟಕರು: ಶ್ರೀಕಾಂತಾಚಾರ್ಯ ಮಣ್ಣೂರ, ಅಧ್ಯಕ್ಷತೆ: ನಂದಕುಮಾರ ಮಾಲಿಪಾಟೀಲ್, ಪ್ರಶಸ್ತಿ ಪ್ರದಾನ: ಅಂಬಯ್ಯ ನೂಲಿ ಮಾನ್ವಿ, ರಮಾನಂದ ಹಿರೇಜೇವರ್ಗಿ, ನಾಗಣ್ಣ ರೇವೂರ.

* ಸಂಜೆ 6.00: ಸುಪರ ಮಾರ್ಕೆಟ್‌ನ ಶ್ರೀನಿವಾಸರಾವ್ ರಘೋಜಿ ಸಭಾಂಗಣದಲ್ಲಿ ರಾಷ್ಟ್ರೀಯ ಸಮಗ್ರತಾ ದಿನ. ಮುಖ್ಯ ಅತಿಥಿಗಳು: ಅಂಜುಂ ಪರ್ವೇಜ್, ಅತಿಥಿಗಳು: ಡಾ.ರಾಮಚಂದ್ರರಾವ್, ಎಂ.ಎಸ್. ಶ್ರೀಕರ, ಸುಭಾಷ ರಾಠೋಡ.

* ಸಂಜೆ 6.30: ಬ್ರಹ್ಮಪುರದ ಶ್ರೀ ಶರಣಬಸವೇಶ್ವರ ಕಾಂಪ್ಲೆಕ್ಸ್ ವಾಸ್ತುಶಾಂತಿ ಸಮಾರಂಭ. ಸಾನ್ನಿಧ್ಯ: ಪೂಜ್ಯ ಡಾ.ಶರಣಬಸವಪ್ಪ ಅಪ್ಪ, ಮುಖ್ಯ ಅತಿಥಿಗಳು: ಆರ್.ಆರ್.ದೇಸಾಯಿ, ಅಧ್ಯಕ್ಷತೆ: ಅಮೃತರಾವ ಪಾಟೀಲ್, ಅತಿಥಿಗಳು: ರೇವಯ್ಯಸ್ವಾಮಿ, ಅಣ್ಣಾರಾವ ಪಾಟೀಲ್ ಕೋರಳ್ಳಿ, ಬಿ.ಜಿ.ಜವಳಿ, ವಿಶ್ವನಾಥ ಶಿವಣಗಿ, ನಾರಾಯಣರಾವ ಕಾಳೆ, ಸಿದ್ರಾಮಪ್ಪ ಐರೆಡ್ಡಿ,ಶರಣಬಸಪ್ಪಪಾಟೀಲ್ ಜವಳಿ (ಡಿ), ಜಿ.ಡಿ.ಅಣಕಲ್, ಜಗದೀಶ ಪಾಟೀಲ್, ಬಿ.ಆರ್.ಪಾಟೀಲ್ ಹಳ್ಳಿಸಲಗರ, ಚಂದ್ರಶೇಖರ ಸುಲ್ತಾನಪುರ, ಅಲ್ಲಂಪ್ರಭು ಪಾಟೀಲ್. ಕಲ್ಯಾಣರಾವ ಪಾಟೀಲ್. ಶರಣಬಸಪ್ಪ ಬೆಣ್ಣೂರ, ಶೇಷರಾವ ಪಾಟೀಲ್ ಶಿರೂರ, ನಂದಕುಮಾರ ಪಾಟೀಲ್, ವೀರಣಗೌಡ ಪಾಟೀಲ್, ಎನ್.ಡಿ.ಪಾಟೀಲ್, ಶರಣಬಸಪ್ಪ ಪಾಟೀಲ್.

## ಹಿರೇಮಣ್ಣೂರ (ತಾ.ಅಫಜಲಪುರ)

* ಬೆಳಗ್ಗೆ 8.00: ಉತ್ತರಾಧಿ ಮಠದಲ್ಲಿ ವೇದೇಶತೀರ್ಥರ ಆರಾಧನಾ ಮಹೋತ್ಸವದ ನಿಮಿತ್ತ ವಿದ್ಯಾರ್ಥಿಗಳಿಂದ ಅನುವಾದ. 10ಕ್ಕೆ: ಗಜವಾಹನೋತ್ಸವ, 11ಕ್ಕೆ ಶ್ರೀ ಮೂಲರಾಮದೇವರ ಪೂಜೆ ತೀರ್ಥ ಪ್ರಸಾದ್, 5ಕ್ಕೆ ಭಾಗವತ ಪುರಾಣ, ದೀಪೋತ್ಸವ, ಪಂಡಿತರ ಪ್ರವಚನ ಮಹಾಮಂಗಳಾರತಿ.

# * * ಗುಲ್ಬರ್ಗದಲ್ಲಿ ಇಂದು * *

**ಶುಕ್ರವಾರ, ನ. 19**

**ಜಿಲ್ಲಾಡಳಿತ, ಬಾಲಕಾರ್ಮಿಕ ಪದ್ಧತಿ ನಿರ್ಮೂಲನಾ ಸಮಿತಿ, ಯುನಿಸೆಫ್, ನೊರಾಡ್ ಯೋಜನೆ, ಜಿಲ್ಲೆಯ ಸ್ವಯಂ ಸೇವಾ ಸಂಸ್ಥೆ:** ಚಂದ್ರಶೇಖರ ಪಾಟೀಲ ಕ್ರೀಡಾಂಗಣ. ಕ್ರೀಡಾಕೂಟ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳು. ಉದ್ಘಾಟನೆ- ಜಿ.ಪಂ. ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ ಶ್ರೀಕರ. ಮುಖ್ಯ ಅತಿಥಿ- ಕಂದಾಯ ಇಲಾಖೆ ಸಹಾಯಕ ಆಯುಕ್ತ ರಮೇಶ ಬೇಗಾರ. ಬೆಳಿಗ್ಗೆ 9.00.

**ಸಂಯುಕ್ತ ಜನತಾ ದಳ ಜಿಲ್ಲಾ ಘಟಕ:** ವೀರಶೈವ ಕಲ್ಯಾಣ ಮಂಟಪ. ಗುಲ್ಬರ್ಗ ಜಿಲ್ಲಾ ಕಾರ್ಯಕರ್ತರ ಬೃಹತ್ ಸಮಾವೇಶ. ಉದ್ಘಾಟನೆ- ಜೆಡಿಯು ರಾಷ್ಟ್ರೀಯ ಅಧ್ಯಕ್ಷ ಜಾರ್ಜ್ ಫರ್ನಾಂಡಿಸ್. ಮುಖ್ಯ ಅತಿಥಿಗಳು- ವಿಧಾನ ಸಭಾ ಸದಸ್ಯ ಜಿ.ಸಿ. ಮಾಧುಸ್ವಾಮಿ, ಎಂ.ಪಿ. ನಾಡಗೌಡ, ಬಸವರಾಜ ಬೊಮ್ಮಾಯಿ, ಪ್ರಚಾರ ಸಮಿತಿ ಅಧ್ಯಕ್ಷ ಸಿ. ವೀರಣ್ಣ, ಎಚ್. ಆಂಜನೇಯ, ಎಂ.ಕೆ. ನಾಗಮಣಿ ನಾಗೇಗೌಡ, ರಾಷ್ಟ್ರೀಯ ಪ್ರಧಾನ ಕಾರ್ಯದರ್ಶಿ ಶ್ರೀಪತಿರಾವ, ಜೆಡಿಯು ಉಪಾಧ್ಯಕ್ಷ ಬಸವರಾಜ ಇಂಗಿನ, ವಾಸಿಮ್ ಮಲ್ಲಿಕ್ ಇಂಗಳಗಿ. ಅಧ್ಯಕ್ಷತೆ- ಜೆಡಿಯು ರಾಜ್ಯ ಅಧ್ಯಕ್ಷ ಬಿ. ಸೋಮಶೇಖರ. ಬೆಳಿಗ್ಗೆ 10.00.

**ಭಾರತ ಮಕ್ಕಳ ತಜ್ಞರ ಅಕಾಡೆಮಿ, ರಾಷ್ಟ್ರೀಯ ನವಜಾತ ಶಿಶು ವೈದ್ಯರ ವೇದಿದೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ:** ಕೆಬಿಎನ್ ಆಸ್ಪತ್ರೆ. ಉಪನ್ಯಾಸ- ಡಾ| ಅನೂಪ ಶಾಹ, ಡಾ| ಸಿದ್ಧಲಿಂಗ ಚೇಂಗಟಿ. ಬೆಳಿಗ್ಗೆ 10.30.

**ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ರಾಜ್ಯ ಶಾಖೆ, ಇನ್‌ಫೋಸಿಸ್ ಪ್ರತಿಷ್ಠಾನ, ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಜಿಲ್ಲಾ ಘಟಕ:** ಸಂಗಮೇಶ್ವರ ಸಭಾಗೃಹ. ಅಂಗವಿಕಲರಿಗೆ ಸಾಧನೆ ಸಲಕರಣೆಗಳ ವಿತರಣಾ ಸಮಾರಂಭ. ಉದ್ಘಾಟನೆ- ಸಂಸದ ಇಕ್ಬಾಲ ಅಹ್ಮದ ಸರಡಗಿ. ಸಲಕರಣೆ ವಿತರಣೆ- ರೆಡ್‌ಕ್ರಾಸ್ ಉಪಾಧ್ಯಕ್ಷ ಡಾ| ಡಿ.ಎಂ. ನಂಜುಂಡಪ್ಪ. ಮುಖ್ಯ ಅತಿಥಿಗಳು- ಮೇಯರ್ ಅಮೃತ ರಾವ ಪಾಟೀಲ, ಜಿ.ಪಂ. ಅಧ್ಯಕ್ಷೆ ಶೋಭಾ ಬೆಳಮಗಿ, ಡಬ್ಲ್ಯೂ ಪಿ. ಕೃಷ್ಣಾ, ಪ್ರಧಾನ ಕಾರ್ಯದರ್ಶಿ ಡಾ| ಎನ್.ಜಿ. ನಾರಾಯಣ. ಅಧ್ಯಕ್ಷತೆ- ಶಾಸಕ ಚಂದ್ರ ಶೇಖರ ಡಿ. ಪಾಟೀಲ ರೇವೂರ. ಬೆಳಿಗ್ಗೆ 11.00.

**ಸಾರ್ವಜನಿಕ ಶಿಕ್ಷಣ ಇಲಾಖೆ, ಜಿಲ್ಲಾ ವಿಜ್ಞಾನ ಕೇಂದ್ರ, ವ್ಯಕ್ತಿತ್ವ ವಿಕಾಸ ಶಿಕ್ಷಣ ಸಂಘ:** ಕನ್ನಡ ಕಾನ್ವೆಂಟ್ ಶಾಲೆ, ಓಕಳಿ ವಿದ್ಯಾಮಂದಿರ, ಎಂ.ಬಿ.ನಗರ. ಜಿಲ್ಲಾ ಮಟ್ಟದ ವಿಜ್ಞಾನ ಮೇಳ. ಬೆಳಿಗ್ಗೆ 11.00.

**ಮೇಘ ಮಲ್ಹಾರ ಪ್ರತಿಷ್ಠಾನ ಹಾಗೂ ಸ್ವರಾಂಜಲಿ ಸಂಗೀತ ವಿದ್ಯಾಲಯ:** ಸಂಗಮೇಶ್ವರ ಸಭಾಗೃಹ. ಕಿಶನ್‌ರಾವ ಮಲ್ಲೆ ಅವರ 18ನೇ ಶ್ರದ್ಧಾಂಜಲಿ ಸಂಗೀತ ಕಾರ್ಯಕ್ರಮ ಮತ್ತು ಮೇಘ ಮಲ್ಹಾರ ಪ್ರಶಸ್ತಿ ಪ್ರದಾನ ಸಮಾರಂಭ. ಉದ್ಘಾಟನೆ- ಹಿರಿಯ ಪತ್ರಕರ್ತ ಶ್ರೀಕಾಂತಾಚಾರ್ಯ ಮಣ್ಣೂರ. ಅಧ್ಯಕ್ಷತೆ- ಉಪಮೇಯರ್ ನಂದ ಕುಮಾರ ಮಾಲಿ ಪಾಟೀಲ. ಸಂಜೆ 5.30.

## ಅಲ್ಲಲ್ಲಿ ಏನೇನು

**ಅಫಜಲಪೂರ**

**ನೆಹರು ಯುವ ಕೇಂದ್ರ ಹಾಗೂ ಯಶೋಧರೆ ಶಿಕ್ಷಣ ಮತ್ತು ಗ್ರಾಮೀಣ ಅಭಿವೃದ್ಧಿ ಸಂಸ್ಥೆ:** ಸರ್ಕಾರಿ ಬಾಲಕರ ವಸತಿ ನಿಲಯ, ಕೋರ್ಟ್ ರಸ್ತೆ. ಯುವ ಜಾಗೃತಿ ಪ್ರಚಾರ ಆಂದೋಲನ ಕಾರ್ಯಕ್ರಮ. ಬೆಳಿಗ್ಗೆ 11.00.

**ಸುರಪುರ ತಾ.**

**ಕರ್ನಾಟಕ ರಾಜ್ಯ ಸಹಕಾರ ಮಹಾ ಮಂಡಳ ನಿಯಮಿತ, ಗುಲ್ಬರ್ಗ ಜಿಲ್ಲಾ ಸಹಕಾರ ಯೂನಿಯನ್, ಗುಲ್ಬರ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್. ಸಹಕಾರಿ ಇಲಾಖೆ, ಸುರಪುರ ಅರ್ಬನ್ ಕೋ ಆಪರೇಟಿವ್ ಬ್ಯಾಂಕ್:** ಸುರಪುರ ಅರ್ಬನ್ ಕೋ ಆಪರೇಟಿವ್ ಬ್ಯಾಂಕ್ ಸಭಾ ಭವನ. 51ನೇ ಅಖಿಲ ಭಾರತ ಸಹಕಾರ ಸಪ್ತಾಹ. ನಗರ ಹಾಗೂ ಗ್ರಾಮೀಣ ಅಭಿವೃದ್ಧಿಗಾಗಿ ಸಹಕಾರಿ ಪತ್ತು. ಮುಖ್ಯ ಅತಿಥಿಗಳು- ಮಾಜಿ ಸಚಿವ ರಾಜಾ ಮದನಗೋಪಾಲ ನಾಯಕ, ಜಿಲ್ಲಾ ಸಹಕಾರ ಯೂನಿಯನ್ ಅಧ್ಯಕ್ಷ ಸಿದ್ರಾಮರೆಡ್ಡಿ ವಿ ಪಾಟೀಲ, ಬಸವರಾಜ ಜಮಾದ್ರಖಾನಿ, ಸಿ.ಕೆಂಚಪ್ಪ ನಗನೂರ, ಡಾ| ಜಗದೀಶ ಬಿಜಾಸಪೂರ. ಅಧ್ಯಕ್ಷತೆ- ಸುರಪುರ ಅರ್ಬನ್ ಕೋ ಆಪರೇಟಿವ್ ಬ್ಯಾಂಕ್ ಅಧ್ಯಕ್ಷ ರಾಜಾ ರಂಗಪ್ಪ ನಾಯಕ. ಮಧ್ಯಾಹ್ನ 12.15.

**ಲಾಡಚಿಂಚೋಳಿ**

**(ಆಳಂದ ತಾ.)**

**ಸರ್ಕಾರಿ ಪದವಿ ಪೂರ್ವ ಬಾಲಕರ ಕಾಲೇಜು:** ಲಾಡಚಿಂಚೋಳಿ. ರಾಷ್ಟ್ರೀಯ ಸೇವಾ ಯೋಜನೆ ವಿಶೇಷ ವಾರ್ಷಿಕ ಶಿಬಿರ. ಸಮಾರೋಪ ಸಮಾರಂಭ. ಮುಖ್ಯ ಅತಿಥಿ- ಪ್ರಾಚಾರ್ಯ ಎಂ.ಆರ್. ತೆಗ್ಗಿನಮನಿ. ಅಧ್ಯಕ್ಷತೆ- ಪ್ರಾಚಾರ್ಯ ಕೆ.ಎನ್. ಕುಲಕರ್ಣಿ. ಸಂಜೆ 4.00.

**ಶ್ರೀಕ್ಷೇತ್ರ ಹಿರೇಮಣ್ಣೂರು**

**(ಅಫಜಲಪೂರ ತಾ.)**

**ಉತ್ತರಾದಿ ಮಠ:** ಮಠದ ಆವರಣ, ಮಣ್ಣೂರು. ಉತ್ತರಾದಿ ಮಠಾಧೀಶರಾದ ವೇದೇಶತೀರ್ಥರ ಆರಾಧನಾ ಮಹೋತ್ಸವ. ಉತ್ತರಾಧನೆ. ಗಜವಾಹನೋತ್ಸವ (10 ಗಂಟೆ), ಮೂಲರಾಮದೇವರ ಪೂಜೆ, ತೀರ್ಥ ಪ್ರಸಾದ (ಬೆಳಿಗ್ಗೆ 11.00). ಭಾಗವತ ಪುರಾಣ, ದೀಪೋತ್ಸವ, ಪಂಡಿತರ ಪ್ರವಚನ, ಮಹಾ ಮಂಗಳಾರತಿ ಸಂಜೆ 5.00.

**ಬಂದರವಾಡ**

**(ಅಫಜಲಪೂರ ತಾ.)**

**ಶ್ರೀಸುರಗಿ ಮಠ:** ಮಠದ ಆವರಣ. ದೀಪಾವಳಿ ಹಬ್ಬ ಆಚರಣೆ, ಕಾರ್ತಿಕೋತ್ಸವ (ಜಾತ್ರಾ ಮಹೋತ್ಸವ). ಶಿವಕೀರ್ತನೆ- ಹೂವಿನಹಳ್ಳಿಯ ಗುರು ಲಿಂಗಯ್ಯ ಶಾಸ್ತ್ರಿ ಅವರಿಂದ, ಪುರಾಣ ಪ್ರವಚನ- ಕಳ್ಳಿಮಠ- ಚಿಮಣಗೇರಿಯ ಶಿವಬಸಯ್ಯ ಶಾಸ್ತ್ರಿ, ರಾತ್ರಿ 7.00.

# ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರು

ಬೆಂಗಳೂರು, ನ. 2: ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ ಗಣ್ಯರಿಗೆ ಸೋಮವಾರ ಮುಖ್ಯಮಂತ್ರಿ ಎನ್. ಧರ್ಮಸಿಂಗ್ ಅವರು ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದರು.


ಕೆ.ಎಸ್.ಎಲ್. ಸ್ವಾಮಿ


ಡಾ|ಎಚ್. ಜಿ. ಲಕ್ಕಪ್ಪ ಗೌಡ


ದೈವಜ್ಞ ಕೆ.ಎನ್. ಸೋಮಯಾಜಿ


ಎನ್.ಕೆ. ಜೈನ್


ಗಂಗಾಧರ್


ವೈ. ಕೆ. ಮುದ್ದುಕೃಷ್ಣ


ಎ. ಜಯರಾಂ


ವೆಂಕಟನಾರಾಯಣ


ಆದಿಕೇಶವಲು


ಡಬ್ಲ್ಯೂ.ಪಿ. ಕೃಷ್ಣ

ಉದಯವಾಣಿ

ಬುಧವಾರ 3 ನವೆಂಬರ್ 2004

# ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರು

ಬೆಂಗಳೂರು, ನ. 2: ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ ಗಣ್ಯರಿಗೆ ಸೋಮವಾರ ಮುಖ್ಯಮಂತ್ರಿ ಎನ್. ಧರ್ಮಸಿಂಗ್ ಅವರು ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದರು.






ಗಣನೀಯ ಸೇವೆಗಾಗಿ ರಾಜ್ಯೋತ್ಸವ ಪ್ರಶಸ್ತಿಗೆ ಪಾತ್ರರಾದ ವಿವಿಧ ಕ್ಷೇತ್ರಗಳ ಗಣ್ಯರು ಸೋಮವಾರ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ನಡೆದ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಸಾಲಾಗಿ ಆಸೀನರಾಗಿರುವ ದೃಶ್ಯ.

ಕರುನಾಡ ಸಂಜೆ
2-11-2004
ಮಂಗಳವಾರ




ನಿನ್ನೆ ನಗರದ ರವೀಂದ್ರ ಕಲಾಕ್ಷೇತ್ರದಲ್ಲಿ ಏರ್ಪಡಿಸಿದ್ದ ರಾಜ್ಯೋತ್ಸವ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಪ್ರಶಸ್ತಿ ಪುರಸ್ಕೃತರು.

ಉದಯವಾಣಿ

ಬೆಂಗಳೂರು, ಮಂಗಳವಾರ, ನವೆಂಬರ್ 2, 2004




ಬೆಂಗಳೂರಿನಲ್ಲಿ ಸೋಮವಾರ ಸಂಜೆ ನಡೆದ ಸಮಾರಂಭದಲ್ಲಿ ರಾಜ್ಯೋತ್ಸವ ಪ್ರಶಸ್ತಿ ಸ್ವೀಕರಿಸಿದ ವಿವಿಧ ಕ್ಷೇತ್ರಗಳ ಗಣ್ಯರು.

ಪುಟ 2 ಪ್ರಜಾವಾಣಿ, ಭಾನುವಾರ 31ನೇ ಅಕ್ಟೋಬರ್ 2004

# ರಾಜ್ಯೋತ್ಸವ ಪ್ರಶಸ್ತಿ: ಮೂರನೇ ಪಟ್ಟಿ ಪ್ರಕಟ

ಬೆಂಗಳೂರು, ಅ. 30– ಇನ್ನೂ ಹತ್ತು ಮಂದಿಯನ್ನು ಒಳಗೊಂಡ ಮೂರನೇ ಕಂತಿನ' ಪಟ್ಟಿಯನ್ನು ಸರ್ಕಾರ ಇಂದು ಬಿಡುಗಡೆ ಮಾಡುವುದರೊಂದಿಗೆ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರ ಸಂಖ್ಯೆ 108ಕ್ಕೆ ತಲುಪಿದಂತಾಗಿದೆ.

ಇದರೊಂದಿಗೆ ಪ್ರಶಸ್ತಿ ಆಯ್ಕೆ ಪ್ರಕ್ರಿಯೆ ತೀವ್ರ ಗೋಜಲಿಗೆ ಸಿಲುಕಿದಂತಾಗಿದೆ. ಇಂದು ಪ್ರಕಟಿಸಲಾಗಿರುವ ಪಟ್ಟಿಯಲ್ಲಿ ಕನ್ನಡ ಸಾಹಿತ್ಯ ಪರಿಷತ್‌ನ ಅಧ್ಯಕ್ಷ ಹರಿಕೃಷ್ಣ ಪುನರೂರು, ಚೇತನ ರಾಮರಾವ್ (ಚಲನಚಿತ್ರ), ಕೂದುವಳ್ಳಿ ಶಿವಸ್ವಾಮಿ ಚಂದ್ರಶೇಖರ್ (ಹೊರನಾಡು), ವಿಲಿಯಂ ಪಿಂಟೊ ಉಡುಪಿ (ಸಮಾಜ ಸೇವೆ), ಡಬ್ಲ್ಯು.ಪಿ. ಕೃಷ್ಣ (ಸಮಾಜಸೇವೆ), ಡಾ. ರಮಾಕಾಂತ್ ಪೆನ್ನನ್ (ವೈದ್ಯಕೀಯ), ಡಾ. ಎನ್.ಎಂ. ಪ್ರಭು (ವೈದ್ಯಕೀಯ), ಪಿ.ಸಿ. ಸುಬ್ರಹ್ಮಣ್ಯ ಬೆಂಗಳೂರು (ನೃತ್ಯ), ನಾಗರಾಜರಾವ್ (ಪತ್ರಿಕೋದ್ಯಮ), ಡಾ. ಶರತ್ ತಂಗಾ (ವೈದ್ಯಕೀಯ) ಅವರು ಸೇರಿದ್ದಾರೆ.

ರಾಜಕೀಯ ಒತ್ತಡಗಳಿಗೆ ಕಟ್ಟುಬಿದ್ದು ಸಮ್ಮಿಶ್ರ ಸರ್ಕಾರ ಪ್ರಶಸ್ತಿ ಪುರಸ್ಕೃತರ ಪಟ್ಟಿ ಬಿಡುಗಡೆ ಮಾಡುತ್ತಿರುವುದಕ್ಕೆ ವಿವಿಧ ವಲಯಗಳಿಂದ ತೀವ್ರ ಅಸಮಾಧಾನ ವ್ಯಕ್ತವಾಗಿದೆ.

ರಾಜ್ಯೋತ್ಸವ ಪ್ರಶಸ್ತಿ ಆಯ್ಕೆ ಸಮಿತಿ ಸದಸ್ಯರೂ ಸೇರಿದಂತೆ ಸಮಿತಿ ಅಧ್ಯಕ್ಷರಾದ ಕಂದಾಯ ಮತ್ತು ಸಂಸದೀಯ ವ್ಯವಹಾರಗಳ ಸಚಿವ ಎಂ.ಪಿ. ಪ್ರಕಾಶ್ ಅವರು ಕೂಡ ಈ ಬಗ್ಗೆ ಅತೃಪ್ತಿ ಸೂಚಿಸಿದ್ದಾರೆ. 84 ಸದಸ್ಯರ ಮೊದಲನೇ ಪಟ್ಟಿಯನ್ನು ಹೊರತುಪಡಿಸಿ ತಮಗೂ ಈ ಹೆಚ್ಚುವರಿ ಪಟ್ಟಿಗಳಿಗೂ ಯಾವುದೇ ಸಂಬಂಧ ಇಲ್ಲ ಎಂದು ಅವರು ಸ್ಪಷ್ಟಪಡಿಸಿದ್ದಾರೆ.

ಒಂದು ವಾರದ ಕಸರತ್ತಿನ ಬಳಿಕ ಸಮ್ಮಿಶ್ರ ಸರ್ಕಾರದ ಮೊದಲ ರಾಜ್ಯೋತ್ಸವ ಪ್ರಶಸ್ತಿ ಪಟ್ಟಿ ಬಿಡುಗಡೆ ಮಾಡಲಾಯಿತಾದರೂ ಇದು ಅಷ್ಟಕ್ಕೇ ಸೀಮಿತವಾಗದೆ ಪಟ್ಟಿ ಬೆಳೆಯುತ್ತ ಹೋಗಿದೆ. ಇದು ಪ್ರಶಸ್ತಿಗೆ ಆಯ್ಕೆಯಾಗಿರುವ ಅರ್ಹರಿಗೂ ಇರಿಸು ಮುರಿಸು ಉಂಟುಮಾಡಿದೆ.

ಸಂಯುಕ್ತ ಕರ್ನಾಟಕ, ಬೆಂಗಳೂರು

31-10-2004

# ರಾಜ್ಯೋತ್ಸವ ಪ್ರಶಸ್ತಿ ಪಟ್ಟಿ ಮತ್ತಷ್ಟು ಉದ್ದ

ಬೆಂಗಳೂರು, ಅ. 30- 98 ಮಂದಿಯ ಜತೆಗೆ ಮತ್ತೆ ಹತ್ತು ಮಂದಿಯನ್ನು ರಾಜ್ಯೋತ್ಸವ ಪ್ರಶಸ್ತಿಗೆ ರಾಜ್ಯ ಸರ್ಕಾರ ಆಯ್ಕೆ ಮಾಡಿದೆ.

ಮೊದಲ ಕಂತಿನಲ್ಲಿ ಗುರುವಾರ 84 ಮಂದಿಗೆ ರಾಜ್ಯೋತ್ಸವ ಪ್ರಶಸ್ತಿ ನೀಡಲಾಗಿತ್ತು. ಎರಡನೆಯ ಕಂತಿನಲ್ಲಿ ಶುಕ್ರವಾರ 14 ಮಂದಿಯನ್ನು ಹೊಸದಾಗಿ ಸೇರ್ಪಡೆ ಮಾಡಿ ಪ್ರಶಸ್ತಿ ಪಟ್ಟಿಯ ಗಾತ್ರವನ್ನು ಸರ್ಕಾರ ಹಿಗ್ಗಿಸಿತು. ವಾರದ ಕಡೆಯ ದಿನವಾದ ಶನಿವಾರ ಮತ್ತೆ ಪಟ್ಟಿಗೆ ಹತ್ತು ಮಂದಿಯನ್ನು ಸೇರ್ಪಡೆ ಮಾಡಿದೆ. ಮೂರನೆಯ ಪಟ್ಟಿಯಲ್ಲಿ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಹರಿಕೃಷ್ಣ ಪುನರೂರು ಅವರಿಗೆ ರಾಜ್ಯೋತ್ಸವ ಪ್ರಶಸ್ತಿ ಸಿಕ್ಕಿದೆ.

ರಾಜ್ಯೋತ್ಸವ ಪ್ರಶಸ್ತಿಗಳ ಪಟ್ಟಿಯನ್ನು ಹಿಗ್ಗಿಸುತ್ತಿರುವ ಬಗ್ಗೆ ಸಾರ್ವಜನಿಕ ವಲಯದಲ್ಲಿ ತೀವ್ರ ವಿರೋಧ ವ್ಯಕ್ತವಾಗಿದೆ.

ಶನಿವಾರ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರ ಪಟ್ಟಿಗೆ ಸೇರ್ಪಡೆಯಾಗಿರುವವರ ಹೆಸರುಗಳು ಹೀಗಿವೆ.

ಪ್ರಶಸ್ತಿ ವಿಜೇತರ ಪಟ್ಟಿ: ಹರಿಕೃಷ್ಣ ಪುನರೂರು (ಸಾಹಿತ್ಯ), ಚೇತನ ರಾಮರಾವ್ (ಚಲನಚಿತ್ರ), ಕೂದುವಳ್ಳಿ ಶಿವಸ್ವಾಮಿ ಚಂದ್ರಶೇಖರ್ (ಹೊರನಾಡು ಕನ್ನಡಿಗ), ವಿಲಿಯಂ ಪಿಂಟೋ, ಉಡುಪಿ (ಸಮಾಜಸೇವೆ), ಡಬ್ಲ್ಯೂ.ಪಿ. ಕೃಷ್ಣ (ಸಮಾಜಸೇವೆ), ರಮಾಕಾಂತ್ ಪೆನ್ಸನ್ ಬೆಂಗಳೂರು (ವೈದ್ಯಕೀಯ), ಡಾ. ಎಸ್.ಎಂ. ಪ್ರಭು ಹುಬ್ಬಳ್ಳಿ (ವೈದ್ಯಕೀಯ), ಪಿ.ಸಿ. ಸುಬ್ರಹ್ಮಣ್ಯ ಬೆಂಗಳೂರು (ನೃತ್ಯ), ನಾಗರಾಜರಾವ್ (ಪತ್ರಿಕೋದ್ಯಮ), ಡಾ. ಶರದ್ ತಂಗಾ (ವೈದ್ಯಕೀಯ).

ವಿಜಯ ಕರ್ನಾಟಕ
ಭಾನುವಾರ 31 ಅಕ್ಟೋಬರ್ 2004

# ಇಗೋ, ಬಂತು ಮತ್ತೊಂದು ಪಟ್ಟಿ!

ಬೆಂಗಳೂರು, ಅ.30 - ರಾಜ್ಯ ಸರಕಾರವು ರಾಜ್ಯೋತ್ಸವ ಪ್ರಶಸ್ತಿ ಆಯ್ಕೆ ಮಾನದಂಡಗಳನ್ನು ಗಾಳಿಗೆ ತೂರಿ ಶನಿವಾರ ಮತ್ತೆ 10 ಮಂದಿ 'ಗಣ್ಯ' ರನ್ನು ಪಶಸ್ತಿ ಪಟ್ಟಿಗೆ ಸೇರಿಸಿ ಶತಕ ಬಾರಿಸಿದೆ.

ಪ್ರಶಸ್ತಿ ಪ್ರದಾನಕ್ಕೆ ಇನ್ನೂ 24 ಗಂಟೆಗಳು ಬಾಕಿ ಉಳಿದಿದ್ದು, ಇದುವರೆಗೆ ಒಟ್ಟು 108 ಮಂದಿ ರಾಜ್ಯೋತ್ಸವ ಪ್ರಶಸ್ತಿಗೆ ಆಯ್ಕೆಗೊಂಡಿದ್ದಾರೆ. ಈ ಸಂಖ್ಯೆ ಇನ್ನೂ ಏರುವ ಸಾಧ್ಯತೆಗಳನ್ನೂ ತಳ್ಳಿ ಹಾಕುವಂತಿಲ್ಲ.

ಪ್ರಶಸ್ತಿಗೆ ಆಯ್ಕೆಗೊಂಡವರ ಪಟ್ಟಿ ಹನುಮಂತನ ಬಾಲದಂತೆ ಬೆಳೆಯುತ್ತಿದೆ. 'ಸುಮಿತ್ರ ಸ್ನೇಹಿತ'ರನ್ನು ತೃಪ್ತಿ ಪಡಿಸುವ ಉದ್ದೇಶಕ್ಕೆ ರಾಜ್ಯೋತ್ಸವ ಪ್ರಶಸ್ತಿ ಬಳಸಿಕೊಂಡಿರುವುದು ಸರಕಾರದ ಧೋರಣೆಯಿಂದ ಸಾಬೀತಾಗಿದೆ.

ಭಾರತಕ್ಕೆ ಸ್ವಾತಂತ್ರ ಬಂದು 57 ವರ್ಷಗಳು ಸಂದ ಹಿನ್ನೆಲೆಯಲ್ಲಿ ಈ ಬಾರಿ ಅಷ್ಟೇ ಸಂಖ್ಯೆ ಗಣ್ಯರಿಗೆ ಪ್ರಶಸ್ತಿ ನೀಡಲಾಗುವುದು ಎಂದು ಹಿರಿಯ ಸಚಿವ ಹಾಗೂ ಪ್ರಶಸ್ತಿ ಸಮಿತಿ ಅಧ್ಯಕ್ಷ ಎಂ.ಪಿ. ಪ್ರಕಾಶ್ ವಾರದ ಹಿಂದೆ ಹೇಳಿದ್ದರು.

ಆದರೆ ಪ್ರಶಸ್ತಿಗೆ ಆಯ್ಕೆ ಮಾಡುವಾಗ ವಿಪರೀತ ರಾಜಕೀಯ ಒತ್ತಡಗಳು ಬಂದ ಹಿನ್ನೆಲೆಯಲ್ಲಿ 84 ಮಂದಿಯನ್ನು ರಾಜ್ಯೋತ್ಸವ ಪ್ರಶಸ್ತಿಗೆ ಆಯ್ಕೆ ಮಾಡಿ ಗುರುವಾರ ಸಂಜೆ ಸರಕಾರ ಪಟ್ಟಿ ಬಿಡುಗಡೆ ಮಾಡಿತ್ತು.

ಜಿಲ್ಲಾವಾರು ಹಾಗೂ ಜಾತೀವಾರು ಪ್ರಾತಿನಿಧ್ಯ ನೀಡಿದ್ದರೂ ಇನ್ನಷ್ಟು ಒತ್ತಡಗಳು ಬಂದ ಕಾರಣ ಶುಕ್ರವಾರ ಮತ್ತೆ 14 ಗಣ್ಯರನ್ನು ಪ್ರಶಸ್ತಿ ಪಟ್ಟಿಗೆ ಸೇರಿಸಲಾಗಿತ್ತು. ಆಗ ಶತಕಕ್ಕೆ ಎರಡು ಸಂಖ್ಯೆ ಕಡಿಮೆ ಆಗಿತ್ತು. ಅಂತೂ ಸರಕಾರ ಶನಿವಾರ 108 ತಲುಪಿ ಶತಕ ಮೀರಿತು.


ಪುನರೂರು


ಸುಬ್ರಹ್ಮಣ್ಯ

ಹೊಸದಾಗಿ ಪ್ರಶಸ್ತಿ ಪಟ್ಟಿಗೆ ಸೇರ್ಪಡೆಗೊಂಡ 10 ಗಣ್ಯರ ಹೆಸರು ಇಂತಿದೆ: ಹರಿಕೃಷ್ಣ ಪುನರೂರು, ಚೇತನ್ ರಾಮರಾವ್ (ಚಲನ ಚಿತ್ರ), ಕೂದುವಳ್ಳಿ ಶಿವಸ್ವಾಮಿ ಚಂದ್ರಶೇಖರ್ (ಹೊರನಾಡು ಕನ್ನಡಿಗ), ಉಡುಪಿ ವಿಲಿಯಂ ಪಿಂಟೋ ( ಸಮಾಜ ಸೇವೆ), ಡಬ್ಲ್ಯೂ ಪಿ. ಕೃಷ್ಣ (ಸಮಾಜಸೇವೆ), ರಮಾಕಾಂತ್ ವೆನ್ಸನ್ (ವೈದ್ಯಕೀಯ), ಪಿ. ಸಿ. ಸುಬ್ರಹ್ಮಣ್ಯ (ನೃತ್ಯ), ನಾಗರಾಜ ರಾವ್ (ಪತ್ರಿಕೋದ್ಯಮ) ಹಾಗೂ ಡಾ. ಶರತ್ ತಂಗಾ (ವೈದ್ಯ) ಅವರನ್ನು ಪ್ರಶಸ್ತಿಗೆ ಆಯ್ಕೆ ಮಾಡಲಾಗಿದೆ.

ವೈದ್ಯ ಹಾಗೂ ಸಮಾಜಸೇವೆಗೆ ಸರಕಾರ ಅತಿ ಹೆಚ್ಚಿನ ಪ್ರಾಮುಖ್ಯತೆ ನೀಡಿದೆ. ಹರಿಕೃಷ್ಣ ಪುನರೂರುಗೆ ಯಾವ ಕ್ಷೇತ್ರದಲ್ಲಿ ಸಾಧನೆ ಮಾಡಿದ ಕಾರಣಕ್ಕೆ ಪ್ರಶಸ್ತಿಗೆ ಆಯ್ಕೆ ಮಾಡಲಾಗಿದೆ ಎಂಬುದನ್ನು ಸರಕಾರ ತಿಳಿಸಿಲ್ಲ.

**ವಿರೋಧ:** ಪ್ರಶಸ್ತಿ ಆಯ್ಕೆ ಸಮಿತಿ ಅಧ್ಯಕ್ಷರಾಗಿರುವ ಹಿರಿಯ ಸಚಿವ ಎಂ.ಪಿ. ಪ್ರಕಾಶ್ ಅವರಿಗೆ ಈ ಬೆಳವಣಿಗೆ ತೀವ್ರ ಬೇಸರ ತಂದಿದೆ ಎಂದು ಮೂಲಗಳು ತಿಳಿಸಿವೆ.

ಮಾನದಂಡಗಳನ್ನು ಗಾಳಿಗೆ ತೂರಿ ಪ್ರಶಸ್ತಿಗೆ ಆಯ್ಕೆ ಮಾಡಿರುವ ವಿಧಾನದ ಬಗ್ಗೆ ಅವರು ತೀವ್ರ ಆಕ್ರೋಶ ವ್ಯಕ್ತಪಡಿಸಿದ್ದಾರೆ ಎಂದು ತಿಳಿದು ಬಂದಿದೆ. ಒಂದು ಹಂತದಲ್ಲಿ ಶುಕ್ರವಾರ ಆಯ್ಕೆಗೊಂಡವರ ಪಟ್ಟಿಗೆ ಸಹಿ ಹಾಕಲು ಅವರು ಹಿಂದೇಟು ಹಾಕಿದ್ದರು ಎನ್ನಲಾಗಿದೆ.

ರಾಜಕೀಯ ಒತ್ತಡಕ್ಕೆ ಮಣಿದು ರಾಜ್ಯೋತ್ಸವ ಪಶಸ್ತಿ ಪಟ್ಟಿಗೆ ಕೆಲವರನ್ನು ಸೇರ್ಪಡೆ ಮಾಡಿರುವ ಕ್ರಮವನ್ನು ಪಶಸ್ತಿ ಆಯ್ಕೆ ಸಮಿತಿ ಸದಸ್ಯರಾದ ಡಿ.ಎಂ. ನಂಜುಂಡಪ್ಪ ಹಾಗೂ ದೇ.ಜೇ. ಗೌಡ ತೀವ್ರವಾಗಿ ಟೀಕಿಸಿದ್ದಾರೆ.

ಆಯ್ಕೆ ಸಮಿತಿಯನ್ನು ಕಡೆಗಣಿಸಿ ಕೊನೆ ಕ್ಷಣದಲ್ಲಿ ಪ್ರಶಸ್ತಿಗೆ ಆಯ್ಕೆ ಮಾಡಿರುವ ಸರಕಾರದ ಕ್ರಮ ಸರಿಯಲ್ಲ. ಈ ರೀತಿ ಮಾಡುವ ಹಾಗಿದ್ದರೆ ಆಯ್ಕೆ ಸಮಿತಿಯನ್ನು ರಚಿಸುವ ಅಗತ್ಯ ಇರಲಿಲ್ಲ ಎಂದು ನಂಜುಂಡಪ್ಪ ಹೇಳಿದ್ದಾರೆ.

ಕನ್ನಡಪ್ರಭ

ಭಾನುವಾರ, 31 ಅಕ್ಟೋಬರ್ 2004

# ಸದ್ಯಕ್ಕೆ 108... ಸಶೇಷ

ಕನ್ನಡಪ್ರಭ ವಾರ್ತೆ, ಬೆಂಗಳೂರು. ಅ.30
ಗುರುವಾರ 84, ಶುಕ್ರವಾರ 98. ಶನಿವಾರ ನೂರೆಂಟು.

ಇದು ಪ್ರಸಕ್ತ ಸಾಲಿನ ಕರ್ನಾಟಕ ರಾಜ್ಯೋತ್ಸವ ಪುರಸ್ಕೃತರ ಸಂಖ್ಯೆ ಕಳೆದ ಮೂರು ದಿನಗಳಲ್ಲಿ ಸಾಗಿದ ದಾರಿ. ಶನಿವಾರ ರಾತ್ರಿ ವೇಳೆಗೆ ಶತಕ ಬಾರಿಸಿ 108 ತಲುಪಿದೆ. ಇದೂ ಅಂತಿಮವಲ್ಲ. 'ಸ್ಕೋರ್' ಗಳಿಕೆ ಇನ್ನೂ 'ಯಶಸ್ವಿ'ಯಾಗಿ ಮುಂದುವರೆಯುವ ಎಲ್ಲ ಸಾಧ್ಯತೆಗಳೂ ಇವೆ.

ಸೋಮವಾರ ಸಂಜೆ ಪ್ರಶಸ್ತಿ ಪ್ರದಾನ ಸಮಾರಂಭ ನಡೆಯುವ ಕೊನೆಯ ಕ್ಷಣದ ವರೆಗೂ ಈ ಸಂಖ್ಯೆ ಎಷ್ಟಕ್ಕೆ ತಲುಪಲಿದೆ ಎಂಬುದು ಸ್ವತಃ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೂ ಗೊತ್ತಿಲ್ಲ!

ಶನಿವಾರ ಸೇರ್ಪಡೆಗೊಂಡ ಹತ್ತು ಮಂದಿ ಪುರಸ್ಕೃತರು:–

ಹರಿಕೃಷ್ಣ ಪುನರೂರು (ದಕ್ಷಿಣ ಕನ್ನಡ), ಚೇತನ ರಾಮರಾವ್, ಚಲನಚಿತ್ರ (ಮೈಸೂರು), ಕೂಡುವಳ್ಳಿ ಶಿವಸ್ವಾಮಿ ಚಂದ್ರಶೇಖರ, ಹೊರನಾಡ ಕನ್ನಡಿಗ, ವಿಲಿಯಂ ಪಿಂಟೋ, ಸಮಾಜಸೇವೆ (ಉಡುಪಿ), ಡಬ್ಲ್ಯು.ಪಿ.ಕೃಷ್ಣ, ಸಮಾಜಸೇವೆ (ಬೆಂಗಳೂರು), ರಮಾಕಾಂತ್ ವೆನ್‌ಸನ್, ವೈದ್ಯ (ಬೆಂಗಳೂರು), ಎನ್.ಎಂ.ಪ್ರಭು, ವೈದ್ಯ (ಹುಬ್ಬಳ್ಳಿ), ಪಿ.ಸಿ.ಸುಬ್ರಹ್ಮಣ್ಯ, ನೃತ್ಯ (ಬೆಂಗಳೂರು), ನಾಗರಾಜರಾವ್, ಪತ್ರಿಕೋದ್ಯಮ (ಬಳ್ಳಾರಿ), ಡಾ।ಶರದ್ ಎಂ.ತಂಗಾ, ವೈದ್ಯ (ಗುಲಬರ್ಗಾ).

ಇಷ್ಟೊಂದು ಪ್ರಮಾಣದಲ್ಲಿ ಏರಿಕೆಗೆ ಆಕಾಂಕ್ಷಿಗಳ ಪರವಾಗಿ ಸಮ್ಮಿಶ್ರ-ಸರ್ಕಾರದ ಪಾಲುದಾರ ಪಕ್ಷಗಳ ಮುಖಂಡರ 'ಪ್ರಭಾವ' ಹಾಗೂ ಬಲವಾದ 'ಲಾಬಿ'ಯೇ ಕಾರಣ. ಈ ನಡುವೆ ಪ್ರಶಸ್ತಿ ಪುರಸ್ಕೃತರ ಆಯ್ಕೆ ಸಮಿತಿ ಅಧ್ಯಕ್ಷರೂ. ಆಗಿರುವ ಕಂದಾಯ ಸಚಿವ ಎಂ.ಪಿ.ಪ್ರಕಾಶ್ ತೀವ್ರ ಅಸಮಧಾನಗೊಂಡಿದ್ದಾರೆ. ತಮ್ಮ ಅಸಮಾಧಾನವನ್ನು ಮುಖ್ಯಮಂತ್ರಿಗಳ ಬಳಿಗೆ ನೇರವಾಗಿ ತೋಡಿಕೊಂಡು, ತಮ್ಮ ಇತಿಮಿತಿಯೊಳಗೆ ಸೂಕ್ತ ಪ್ರತಿಭಟನೆಯನ್ನೂ ವ್ಯಕ್ತಪಡಿಸಿದ್ದಾರೆ.

➤ 4ನೇ ಪುಟ ನೋಡಿ

ಸೂರ್ಯೋದಯ

ಭಾನುವಾರ, 31 ಅಕ್ಟೋಬರ್ 2004

... ಬಂದರೂ ಅಚ್ಚರಿ ಇಲ್ಲ •

# ಶತಕ ದಾಟಿದ ರಾಜ್ಯೋತ್ಸವ ಪುರಸ್ಕೃತರು

ಬೆಂಗಳೂರು, ಅ.30- ರಾಜ್ಯೋತ್ಸವ ಪ್ರಶಸ್ತಿ ಪ್ರದಾನ ಸಮಾರಂಭಕ್ಕೆ ಒಂದು ದಿನ ಮಾತ್ರ ಬಾಕಿಯಿದೆ...ಪ್ರಶಸ್ತಿಗಳ ಮೂರನೇ ಪಟ್ಟಿ ಬಿಡುಗಡೆಯಾಗಿದೆ... ಪುರಸ್ಕೃತರ ಪಟ್ಟಿ ಶತಕ ದಾಟಿದೆ...ಸೋಮವಾರದ ಸಮಾರಂಭದ ಹೊತ್ತಿಗೆ ಇನ್ನಷ್ಟು ಹೆಸರು ಸೇರ್ಪಡೆ ಸಂಭವ...

ಮುಖ್ಯಮಂತ್ರಿ ಧರ್ಮಸಿಂಗ್ ಅವರಿಗೆ ಸಂಪುಟ ವಿಸ್ತರಣೆಯಲ್ಲಿ ಮಾತ್ರವಲ್ಲ, ಪ್ರಶಸ್ತಿ-ಪುರಸ್ಕಾರಗಳಲ್ಲೂ ಸಮ್ಮಿಶ್ರ ಸರ್ಕಾರದ ಬಿಸಿ ತಟ್ಟಿದೆ. ಸಚಿವರು, ಶಾಸಕರು ಹಾಗೂ 'ಇನ್ನಿತರ ನಾಯಕರ' ಒತ್ತಡಕ್ಕೆ ಸಿಲುಕಿರುವ ಮುಖ್ಯಮಂತ್ರಿಯವರು ಮೂರನೇ ಪಟ್ಟಿಯಲ್ಲಿ ಮತ್ತೆ ಹತ್ತು ಮಂದಿಗೆ ರಾಜ್ಯೋತ್ಸವ ಪ್ರಶಸ್ತಿಯ 'ದಯೆ' ತೋರಿದ್ದಾರೆ.

ಇದರೊಂದಿಗೆ ಈ ಬಾರಿ ರಾಜ್ಯೋತ್ಸವ ಪ್ರಶಸ್ತಿ ಪಡೆಯುವವರ ಸಂಖ್ಯೆ ಶನಿವಾರ ಸಂಜೆಯವರೆಗೆ 108 ರಲ್ಲಿತ್ತು. ಆಯ್ಕೆ ಸಮಿತಿಯ ಅಧ್ಯಕ್ಷ ಹಾಗೂ ಕಂದಾಯ ಸಚಿವ ಎಂ.ಪಿ.ಪ್ರಕಾಶ್ ಶುಕ್ರವಾರ ಮತ್ತೆ ಪ್ರಶಸ್ತಿ ಪಟ್ಟಿ ಪ್ರಕಟಿಸಿರುವ ಕುರಿತು ನೇರವಾಗಿ ಮುಖ್ಯಮಂತ್ರಿಯವರ ಬಳಿ ಅಸಮಾಧಾನ ವ್ಯಕ್ತಪಡಿಸಿದ್ದರೂ ಪ್ರಶಸ್ತಿ ಪುರಸ್ಕೃತರ ಮೂರನೇ ಕಂತು ಬಿಡುಗಡೆಯಾಗಿದೆ.

ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರಿಗೆ ವಿಧಾನ ಪರಿಷತ್ ಸ್ಥಾನವನ್ನೇ ನೀಡಬೇಕೆಂದು ಪ್ರತಿಪಾದಿಸಿದ್ದ ಹರಿಕೃಷ್ಣ ಪುನರೂರು ಅವರಿಗೆ ಪ್ರಶಸ್ತಿಯ ಮೂರನೇ ಪಟ್ಟಿಯಲ್ಲಿ ಸ್ಥಾನ ನೀಡಲಾಗಿದೆ. ಮೂವರು ವೈದ್ಯರೂ ಇದರಲ್ಲಿದ್ದಾರೆ.



ಪುನರೂರು

## ಹೊಸ ಪಟ್ಟಿ

ಚೇತನ ರಾಮರಾವ್ (ಚಲನಚಿತ್ರ), ಕೂದುವಳ್ಳಿ ಶಿವಸ್ವಾಮಿ ಚಂದ್ರಶೇಖರ್ (ಹೊರನಾಡ ಕನ್ನಡಿಗ), ವಿಲಿಯಂ ಪಿಂಟೋ (ಸಮಾಜ ಸೇವೆ), ಡಬ್ಲ್ಯೂ.ಪಿ. ಕೃಷ್ಣ (ಸಮಾಜ ಸೇವೆ), ರಮಾಕಾಂತ್ ವೆನ್ನಸ್ (ವೈದ್ಯ), ಡಾ.ಎನ್.ಎಂ.ಪ್ರಭು (ವೈದ್ಯ), ಪಿ.ಸಿ.ಸುಬ್ರಹ್ಮಣ್ಯ (ನೃತ್ಯ), ನಾಗರಾಜರಾವ್ (ಪತ್ರಿಕೋದ್ಯಮ), ಡಾ.ಶರತ್ ತಂಗಾ (ವೈದ್ಯ), ಹರಿಕೃಷ್ಣ ಪುನರೂರು (ಕ್ಷೇತ್ರ ನಮೂದಾಗಿಲ್ಲ).



ಬೆಂಗಳೂರು, ಅ.30- ಆಯ್ಕೆ ಸಮಿತಿಯನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದೆ ರಾಜ್ಯೋತ್ಸವ ಪ್ರಶಸ್ತಿಯ ಎರಡು ಹಾಗೂ ಮೂರನೇ ಕಂತು ಪ್ರಕಟಿಸಿರುವ ಸರ್ಕಾರದ ಕ್ರಮ ವ್ಯಾಪಕ ಅಸಮಾಧಾನಕ್ಕೆ ಎಡೆಮಾಡಿಕೊಟ್ಟಿದೆ.

ಸಮಿತಿಯ ಅಧ್ಯಕ್ಷರೂ ಆದ ಕಂದಾಯ ಸಚಿವ ಎಂ.ಪಿ.ಪ್ರಕಾಶ್ ಹಾಗೂ ಹಲವು ಸದಸ್ಯರು ಈ ಬಗ್ಗೆ ತೀವ್ರ ಆಕ್ಷೇಪ ವ್ಯಕ್ತಪಡಿಸಿದ್ದಾರೆ. ಶನಿವಾರ ಮುಖ್ಯಮಂತ್ರಿ ಧರ್ಮಸಿಂಗ್ ಅವರೊಂದಿಗೆ ದೂರವಾಣಿಯಲ್ಲಿ ಮಾತನಾಡಿದ ಸಚಿವ ಪ್ರಕಾಶ್ ತಮ್ಮ ತೀವ್ರ ಅಸಮಾಧಾನ ತಿಳಿಸಿದ್ದಾರೆ ಎಂದು ತಿಳಿದು ಬಂದಿದೆ.

ಮಿತಿಯಿಲ್ಲದೆ ಪ್ರಶಸ್ತಿ ಪ್ರಕಟಿಸಿರುವುದರಿಂದ ಪ್ರಶಸ್ತಿಗಷ್ಟೇ ಅಲ್ಲ, ರಾಜ್ಯದ ಗೌರವಕ್ಕೂ ಕುಂದುಂಟಾಗಿದೆ. ರಾಜ್ಯೋತ್ಸವ ಪ್ರಶಸ್ತಿಗೂ ನನಗೂ ಇನ್ನು ಮುಂದೆ ಯಾವುದೇ ಸಂಬಂಧವಿಲ್ಲ, ಈ ಸಂಬಂಧ ಯಾವುದಕ್ಕೂ ನನ್ನನ್ನು ಜವಾಬ್ದಾರನನ್ನಾಗಿ ಮಾಡಬೇಡಿ ಎಂದು ಅವರು ಮುಖ್ಯಮಂತ್ರಿ ಧರ್ಮಸಿಂಗ್ ಅವರಿಗೆ ತಿಳಿಸಿದ್ದಾರೆ.

...ಪುಟ 8

ಉದಯವಾಣಿ
ಭಾನುವಾರ 31 ಅಕ್ಟೋಬರ್ 2004

# ಮತ್ತೆ 10 ಗಣ್ಯರಿಗೆ ರಾಜ್ಯೋತ್ಸವ ಪ್ರಶಸ್ತಿ

ಬೆಂಗಳೂರು,ಅ.30: ಈ ಬಾರಿಯ ಕನ್ನಡ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರ ಪಟ್ಟಿಗೆ ರಾಜ್ಯ ಸರ್ಕಾರ ಮತ್ತೆ ಹತ್ತು ಜನರ ಹೆಸರನ್ನು ಸೇರಿಸಿದ್ದು ಪ್ರಶಸ್ತಿ ಪುರಸ್ಕೃತರ ಸಂಖ್ಯೆ 108ಕ್ಕೆ ಏರಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಹರಿಕೃಷ್ಣ ಪುನರೂರು, ಚೇತನ ರಾಮರಾವ್ (ಚಲನಚಿತ್ರ), ಕೂದುವಳ್ಳಿ ಶಿವಸ್ವಾಮಿ ಚಂದ್ರಶೇಖರ್ (ಹೊರನಾಡು ಕನ್ನಡಿಗ), ವಿಲಿಯಂ ಪಿಂಟೋ, ಉಡುಪಿ (ಸಮಾಜಸೇವೆ), ಡಬ್ಲ್ಯೂ.ಪಿ.ಕೃಷ್ಣ (ಸಮಾಜ ಸೇವೆ), ರಮಾಕಾಂತ ವೆನ್ನನ್, ಬೆಂಗಳೂರು (ವೈದ್ಯಕೀಯ), ಡಾ.ಎಂ.ಎನ್.ಪ್ರಭು, ಹುಬ್ಬಳ್ಳಿ(ವೈದ್ಯಕೀಯ), ಪಿ.ಸಿ.ಸುಬ್ರಹ್ಮಣ್ಯ, ಬೆಂಗಳೂರು(ನೃತ್ಯ), ನಾಗರಾಜರಾವ್ (ಪತ್ರಿಕೋದ್ಯಮ) ಹಾಗೂ ಡಾ.ಶರತ್‌ತಂಗಾ, ಗುಲ್ಬರ್ಗಾ(ವೈದ್ಯಕೀಯ) ಅವರ ಹೆಸರನ್ನು ಇಂದು ಪಟ್ಟಿಗೆ ಸೇರಿಸಲಾಗಿದೆ.

ಈ ಸೇರ್ಪಡೆಯಿಂದಾಗಿ ಪ್ರಶಸ್ತಿ ಪುರಸ್ಕೃತ ಗಣ್ಯರ ಸಂಖ್ಯೆ 105ಕ್ಕೆ ಹಾಗೂ ಸಂಸ್ಥೆಗಳ ಸಂಖ್ಯೆ 3ಕ್ಕೆ ಏರಿದೆ. ಪ್ರಶಸ್ತಿ ಪ್ರದಾನ ಸಮಾರಂಭಕ್ಕೆ ಇನ್ನೂ ಎರಡು ದಿನಗಳು ಬಾಕಿ ಇರುವುದರಿಂದ ಪ್ರಶಸ್ತಿ ವಿಜೇತರ ಪಟ್ಟಿ ಇನ್ನಷ್ಟು ಬೆಳೆದರೂ ಆಶ್ಚರ್ಯ ಪಡಬೇಕಾಗಿಲ್ಲ.

■ 9ನೇ ಪುಟಕ್ಕೆ

# ಮತ್ತೆ 10 ಗಣ್ಯರಿಗೆ ರಾಜ್ಯೋತ್ಸವ ಪ್ರಶಸ್ತಿ

■ ಒಂದನೇ ಪುಟದಿಂದ

**ಅಸಮಾಧಾನ:** ಪ್ರಶಸ್ತಿ ವಿಜೇತರ ಪಟ್ಟಿಗೆ ದಿನೇ ದಿನೇ ಹೆಸರುಗಳು ಸೇರ್ಪಡೆ ಆಗುತ್ತಿರುವ ಕುರಿತು ಪ್ರಶಸ್ತಿ ಆಯ್ಕೆ ಸಲಹಾ ಸಮಿತಿಯ ಅಧ್ಯಕ್ಷರೂ ಆಗಿರುವ ಕಂದಾಯ ಸಚಿವ ಎಂ.ಪಿ.ಪ್ರಕಾಶ್ ಅವರು ತೀವ್ರ ಅಸಮಾಧಾನ ಗೊಂಡಿದ್ದಾರೆ ಎಂದು ತಿಳಿದುಬಂದಿದೆ.

ಪ್ರಶಸ್ತಿ ಆಯ್ಕೆ ಸಲಹಾ ಸಮಿತಿ ಸಭೆಯ . ನಂತರ ಮುಖ್ಯಮಂತ್ರಿ ಧರ್ಮಸಿಂಗ್ ಹಾಗೂ ಉಪಮುಖ್ಯ ಮಂತ್ರಿ ಸಿದ್ದರಾಮಯ್ಯ ಅವರೊಂದಿಗೆ ಚರ್ಚಿಸಿದ ನಂತರ ಸಿದ್ದಪಡಿಸಿದ 77 ಜನರ ಪಟ್ಟಿ ಏನು ಸಿದ್ದವಾಗಿತ್ತೋ ಅಷ್ಟಕ್ಕೆ ಮಾತ್ರ ತಾವು ಹೊಣೆಯಾಗಿದ್ದು, ಆ ನಂತರ ಹೊಸದಾಗಿ ಎಷ್ಟು ಹೆಸರುಗಳು ಸೇರ್ಪಡೆಯಾಗಿದ್ದರೂ ಕೂಡ ಅದು ತಮ್ಮ ಗಮನಕ್ಕೆ ಬಂದಿಲ್ಲ ಎಂದು ಆಕ್ರೋಶ ವ್ಯಕ್ತಪಡಿಸಿದ್ದಾರೆಂದು ಹೇಳಲಾಗಿದೆ. ವಾಸ್ತವವಾಗಿ 84 ಜನರ ಪಟ್ಟಿಯನ್ನು ತೆಗೆದುಕೊಂಡು ಹೋದಾಗಲೇ 7 ಹೆಸರು ಸೇರ್ಪಡೆ ಯಾಗಿರುವ ಕಾರಣ ಆ ಪಟ್ಟಿಗೆ ಸಹಿ ಮಾಡುವುದಿಲ್ಲ ಎಂದು ವಾಪಸು ಕಳುಹಿಸಿದ್ದರೆಂದು ಗೊತ್ತಾಗಿದೆ.

ಸಲಹಾ ಸಮಿತಿಯ ಅಧ್ಯಕ್ಷರ ಗಮನಕ್ಕೂ ಬಾರದೆ ಪಟ್ಟಿಗೆ ಹೆಸರುಗಳು ದಿನೇ ದಿನೇ ಸೇರುತ್ತಲೇ ಇವೆ.

ಪ್ರಜಾವಾಣಿ, ಶನಿವಾರ 9ನೇ ಅಕ್ಟೋಬರ್ 2004 ಪುಟ 5

# ಔಷಧಿ ಅಂಗಡಿಗೆ ಹಸಿರು ಚಿಹ್ನೆ

ಬೆಂಗಳೂರು, ಅ. 8– ರಾಜ್ಯದ ಔಷಧಿ ಅಂಗಡಿ ವ್ಯಾಪಾರಿಗಳು ಈಗ ಬಳಸುತ್ತಿರುವ ಕೆಂಪು ಬಣ್ಣದ '+' ಚಿಹ್ನೆ ಬದಲು ಇನ್ನು ಮುಂದೆ ಕಡ್ಡಾಯವಾಗಿ ಹಸಿರು ಬಣ್ಣದ '+' ಚಿಹ್ನೆ ಬಳಸಬೇಕು ಎಂದು ನಗರ ಔಷಧಿ ಅಂಗಡಿ ವ್ಯಾಪಾರಿಗಳ ಸಂಘದ ಕಾರ್ಯದರ್ಶಿ ಎಂ.ಜಿ.ರವೀಂದ್ರ ಕುಮಾರ್ ಇಂದು ಇಲ್ಲಿ ಮನವಿ ಮಾಡಿದರು.

ಪತ್ರಿಕಾಗೋಷ್ಠಿಯಲ್ಲಿ ಮಾತನಾಡುತ್ತಿದ್ದ ಅವರು, ಇಂಡಿಯನ್ ರೆಡ್ ಕ್ರಾಸ್ ಸಂಸ್ಥೆ ಕೆಂಪು ಬಣ್ಣದ '+' ಚಿಹ್ನೆ ಬಳಸಬಾರದು ಎಂದು ಆದೇಶಿಸಿದೆ.

ಈ ಮಾಹಿತಿ ಬಹುತೇಕ ಔಷಧಿ ಅಂಗಡಿ ವ್ಯಾಪಾರಿಗಳಿಗೆ ತಿಳಿಯದ ಕಾರಣ ಇನ್ನೂ ಇದೇ ಚಿಹ್ನೆ ಬಳಸುತ್ತಿದ್ದಾರೆ ಎಂದು ತಿಳಿಸಿದರು.

ಕೆಂಪು ಬಣ್ಣದ '+' ಚಿಹ್ನೆ ರಕ್ಷಣಾತ್ಮಕ ಚಿಹ್ನೆಯಾಗಿದ್ದು ಭಾರತೀತ ಸೇನಾ ಪರಿಹಾರ ಕಾರ್ಯದಲ್ಲಿ ಹಾಗೂ ರೆಡ್‌ಕ್ರಾಸ್ ಸ್ವಯಂ ಸೇವಕರು ಮಾತ್ರ ಬಳಸಬೇಕು.

ಆದರೆ ಅಜ್ಞಾನ ಮತ್ತು ಕಠಿಣ ಶಿಕ್ಷೆ ವಿಧಿಸದ ಕಾರಣ ದುರ್ಬಳಕೆಯಾಗಿದೆ ಎಂದು ರವೀಂದ್ರಕುಮಾರ್ ಅಭಿಪ್ರಾಯ ಪಟ್ಟರು.

ಗೋಷ್ಠಿಯಲ್ಲಿ ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿಯ ರಾಜ್ಯ ವಿಭಾಗದ ಡಬ್ಲ್ಯು.ಪಿ.ಕೃಷ್ಣ ಉಪಸ್ಥಿತರಿದ್ದರು.

ಸೆಪ್ಟೆಂಬರ್ 27, 2004

ಉದಯವಾಣಿ



ಅಮೆರಿಕದ ವಿಶ್ವ ವ್ಯಾಪಾರ ಕೇಂದ್ರ ದುರಂತದ ಮೂರನೇ ವರ್ಷದ ಶೋಕಾಚರಣೆ ಸಂದರ್ಭದಲ್ಲಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ರಾಜ್ಯಶಾಖೆ ಇತ್ತೀಚೆಗೆ ಅಂಗವಿಕಲರಿಗೆ ತ್ರಿಚಕ್ರ ವಾಹನಗಳನ್ನು ವಿತರಿಸಿತು. ಈ ಸಂದರ್ಭದಲ್ಲಿ ದಿ. ಶ್ರೇಯಸ್ ರಂಗನಾಥ್ ಅವರ ತಂದೆ ರಂಗನಾಥ್ ಕುಟುಂಬದವರು, ಶ್ಯಾಮಲಾ ಮೋಹನ್, ಡಬ್ಲ್ಯು.ಪಿ. ಕೃಷ್ಣ, ಗೌರವ ಖಜಾಂಚಿಗಳು; ಪ್ರಧಾನ 'ಕಾರ್ಯದರ್ಶಿಗಳು ಹಾಗೂ ಸಂಸ್ಥೆಯ ಸಿಬ್ಬಂದಿ ವರ್ಗ ಉಪಸ್ಥಿತರಿದ್ದರು.

29/8/2004

# ಶೇಷಾದ್ರಿಪುರ ಕಾಲೇಜಿನ ಸೇವಾದಳ ಕಾರ್ಯಕ್ರಮ

ಬೆಂಗಳೂರು, ಆ. ೨೯- ಶೇಷಾದ್ರಿಪುರಂ ಸಂಯುಕ್ತ ಪದವಿಪೂರ್ವ ಕಾಲೇಜಿನ ಪ್ರೌಢಶಾಲಾ ವಿಭಾಗದ ಭಾರತ ಸೇವಾದಳದ ವಾರ್ಷಿಕ ಚಟುವಟಿಕೆಗಳ ಉದ್ಘಾಟನಾ ಸಮಾರಂಭ ಸೆಪ್ಟೆಂಬರ್ 1 ರಂದು ನಡೆಯಲಿದೆ.

ಅಂದು ಬೆಳಿಗ್ಗೆ 10 ಗಂಟೆಗೆ ತುಮಕೂರು ರಸ್ತೆಯಲ್ಲಿರುವ ಮಾದನಾಯಕನಹಳ್ಳಿ ಸರ್ಕಾರಿ ಮಾಧ್ಯಮಿಕ ಶಾಲೆ ಆವರಣದಲ್ಲಿ ನಡೆಯಲಿರುವ ಈ ಸಮಾರಂಭವನ್ನು ಭಾರತ ಸೇವಾದಳದ ನಗರ ಜಿಲ್ಲಾ ಕಾರ್ಯದರ್ಶಿ ಸಿ.ಎನ್.ಎನ್. ರಾಜು ಉದ್ಘಾಟಿಸುವರು.

ಶೇಷಾದ್ರಿಪುರ ಶಿಕ್ಷಣ ದತ್ತಿ [illegible] ಕೆ.ಎಂ. ನಂಜಪ್ಪ ಅಧ್ಯಕ್ಷತೆ ವಹಿಸುವರು.

ಮುಖ್ಯ ಅತಿಥಿಗಳಾಗಿ ಎನ್.ಆರ್. ಪಂಡಿತಾರಾಧ್ಯ, ಎಂ. ಭಾಸ್ಕರ್. ಡಬ್ಲ್ಯು. ಪಿ. ಕೃಷ್ಣ, ಡಾ. ವಿ. ಭಾಸ್ಕರ್, ಎ.ಆರ್. ಶ್ರೀನಿವಾಸಯ್ಯ, ಆರ್. ಕೃಷ್ಣ, ಹೆಚ್.ಎನ್. ಶಿವಕುಮಾರ್ ಆರಾಧ್ಯ ಪಾಲ್ಗೊಳ್ಳಲಿದ್ದಾರೆ.




ಪತ್ರಿಕಾ ಚಳವಳಿ ಹಾಗೂ ಶೇಷಾದ್ರಿಪುರ ಕಾಲೇಜು ಬೆಂಗಳೂರಿನಲ್ಲಿ ಸೋಮವಾರ ಆಯೋಜಿಸಿದ್ದ 'ಕನ್ನಡ ದಿನಪತ್ರಿಕೆಗಳು ಮತ್ತು ಜನಪರ ಕಾಳಜಿ' ವಿಚಾರ ಸಂಕಿರಣವನ್ನು ಪೊಲೀಸ್ ಆಯುಕ್ತ ಎಸ್. ಮರಿಸ್ವಾಮಿ ಉದ್ಘಾಟಿಸಿದರು. ಶೇಷಾದ್ರಿಪುರ ಶಿಕ್ಷಣ ದತ್ತಿ ಗೌ। ಕಾರ್ಯದರ್ಶಿ ಡಬ್ಲ್ಯೂ.ಪಿ. ಕೃಷ್ಣ ವಿಧಾನ ಪರಿಷತ್ ಮಾಜಿ ಸಭಾಪತಿ ಬಿ.ಎಲ್. ಶಂಕರ್, ಕವಿ ದೊಡ್ಡರಂಗೇಗೌಡ ಮತ್ತಿತರರು ಭಾಗವಹಿಸಿದ್ದರು.

ಕನ್ನಡಪ್ರಭ, 3

ಮಂಗಳವಾರ, 24 ಆಗಸ್ಟ್ 2004

# ಶಿಕ್ಷಣ ಶ್ರೀಮಂತರ ಸ್ವತ್ತಾಗಿದೆ: ಬಿ.ಎಲ್.ಶಂಕರ್ ವಿಷಾದ

**ಕನ್ನಡಪ್ರಭ ವಾರ್ತೆ, ಬೆಂಗಳೂರು, ಆ.23**

ಶಿಕ್ಷಣ ಇಂದು ಕೇವಲ ಶ್ರೀಮಂತರ ಸೊತ್ತಾಗಿದೆ, ಶ್ರೀಸಾಮಾನ್ಯರ ಪರವಾಗಿಲ್ಲ ಎಂಬುದು ನೂರಕ್ಕೆ ನೂರು ನಿಜ ಎಂದು ವಿಧಾನಪರಿಷತ್ ಮಾಜಿ ಸಭಾಪತಿ ಬಿ.ಎಲ್.ಶಂಕರ್ ಅವರು ಹೇಳಿದ್ದಾರೆ.

ಸೋಮವಾರ ನಗರದ ಶೇಷಾದ್ರಿಪುರ ಕಾಲೇಜಿನಲ್ಲಿ 'ಕನ್ನಡ ಪತ್ರಿಕೆಗಳು ಮತ್ತು ಜನಪರ ಕಾಳಜಿ' ವಿಷಯದ ಕುರಿತ ವಿಚಾರ ಸಂಕಿರಣದಲ್ಲಿ ಮಾತನಾಡಿ ಅವರು ಮೇಲಿನಂತೆ ನುಡಿದರು.

ವೃತ್ತಿ ಶಿಕ್ಷಣ ಕುರಿತು ನ್ಯಾಯಾಲಯಗಳು ನೀಡುತ್ತಿರುವ ತೀರ್ಪುಗಳು ಮತ್ತು ಸರ್ಕಾರದ ನಡವಳಿಕೆ ಗಮನಿಸಿ ಜನಸಾಮಾನ್ಯರು ಶಿಕ್ಷಣ ಶ್ರೀಮಂತರ ಸೊತ್ತು ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದು, ಇವರ ಅನಿಸಿಕೆ ನೂರಕ್ಕೆ ನೂರು ನಿಜ ಎಂದು ಹೇಳಿದರು.

ಜನಪರ ಕಾಳಜಿ ಇಲ್ಲದ ಪರಿಣಾಮವೇ ಸ್ವಾತಂತ್ರ್ಯ ಬಂದು 58 ವರ್ಷಗಳಾದರೂ ವಿದ್ಯಾರ್ಥಿ ತಾನು ಬಯಸುವ ಶಿಕ್ಷಣ ಪಡೆಯಲು ಸಾಧ್ಯವಾಗುತ್ತಿಲ್ಲ. ಜನಪರ ಕಾಳಜಿ ಶಾಸಕಾಂಗ ಮತ್ತು ನ್ಯಾಯಾಂಗದಲ್ಲಿ ಇಲ್ಲದ್ದರಿಂದ ವಿದ್ಯಾರ್ಥಿಗಳು ಮತ್ತು ಪೋಷಕರು ತಿಂಗಳುಗಟ್ಟಲೆ ಸಿಇಟಿ, ಕೋರ್ಟ್ ಸುತ್ತ ಅಲೆದಾಡುವ ಮತ್ತು ಗೋಗರೆಯುವ ಪರಿಸ್ಥಿತಿ ನಿರ್ಮಾಣವಾಗಿದೆ. ಸಿಇಟಿ ಗೊಂದಲ ಬಗೆಹರಿದಿಲ್ಲ ಎಂದು ಟೀಕಿಸಿದರು.

ರಾಜ್ಯದಲ್ಲಿ 1992 ರಲ್ಲಿ ಸಿಇಟಿ ರಚನೆ ಆಯಿತು. ಇಲ್ಲಿಯವರೆಗೆ ಬಡ- ಮಧ್ಯಮ ವಿದ್ಯಾರ್ಥಿಗಳ ಪರವಾದ ಒಂದು ಕಾನೂನು ರಚಿಸಲು ಏಕೆ ಸಾಧ್ಯವಾಗಲಿಲ್ಲ ಎಂದು ಪ್ರಶ್ನಿಸಿದ ಅವರು, ಒಬ್ಬೊಬ್ಬ ನ್ಯಾಯಾಧೀಶ ಒಂದೊಂದು ರೀತಿಯ ತೀರ್ಪು ನೀಡುತ್ತಿದ್ದಾರೆ. ಇದಕ್ಕೆಲ್ಲ ಜನಪರ ಕಾಳಜಿ ಇಲ್ಲದಿರುವುದೇ ಕಾರಣ ಎಂದವರು ಅಭಿಪ್ರಾಯಪಟ್ಟರು.

ಕೇವಲ ಪತ್ರಿಕಾರಂಗದ ಮೇಲೆ ಮಾತ್ರ ಜನಪರ ಕಾಳಜಿಯ ಉತ್ತರದಾಯಿತ್ವ ಹೊರಿಸಿ ಉಳಿದ ಪ್ರಮುಖ ಕ್ಷೇತ್ರಗಳಾದ ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗದ ಬಗ್ಗೆ ಮಾತನಾಡದೇ ಕೂರುವುದು ಸರಿಯಲ್ಲ. ಎಲ್ಲಾ ಕ್ಷೇತ್ರಗಳು ಉತ್ತರದಾಯಿ ಆದಾಗ ಮಾತ್ರ ನಾವು ಪತ್ರಿಕಾರಂಗದ ಬಗ್ಗೆ ಪ್ರಶ್ನಿಸಬಹುದು. ಜನಪರ ಕಾಳಜಿಯನ್ನು ಮಾಧ್ಯಮಕ್ಕೆ ಮಾತ್ರ ಸೀಮಿತಗೊಳಿಸಲು ಸಾಧ್ಯವಿಲ್ಲ ಎಂದು ಶಂಕರ್ ಹೇಳಿದರು.

ಸ್ವಾತಂತ್ರ್ಯ ಕಾಲದಲ್ಲಿದ್ದ ಕಳಕಳಿ ಮತ್ತು ಕಾಳಜಿ ನಂತರ ಮರೆಯಾಯಿತು. ಎಲ್ಲಾ ಕ್ಷೇತ್ರಗಳಲ್ಲೂ ಶೀಘ್ರ ಮೌಲ್ಯಗಳ ಕುಸಿತ ಉಂಟಾಗಿದೆ. ಪ್ರಪಂಚದಲ್ಲಿ ಅತಿ ಶೀಘ್ರವಾಗಿ ಕೆಡುತ್ತಿರುವ ದೇಶ ಯಾವುದಾದರೂ ಇದ್ದರೆ ಅದು ನಮ್ಮ ದೇಶ. ಇದಕ್ಕೆ ರಾಜಕಾರಣಿಗಳು ಕಾರಣ. ಪ್ರಜಾಪ್ರಭುತ್ವ ಇದ್ದೂ ಜನಪ್ರತಿನಿಧಿಗಳು ಗುಲಾಮರಾಗಿರುವುದು ಈ ದೇಶದಲ್ಲಿ ಮಾತ್ರ.

ಸಿಇಟಿಯಂತಹ ಗೊಂದಲ ಬೇರೆ ರಾಷ್ಟ್ರಗಳಲ್ಲಿ ಆಗಿದ್ದರೆ ಭಾರೀ ಹೋರಾಟವೇ ಆಗುತ್ತಿತ್ತು. ಶಾಲಾ ಕಾಲೇಜುಗಳು ಬಂದ್ ಆಗುತ್ತಿದ್ದವು. ಈ ದೇಶದಲ್ಲಿ ಅದು ಆಗುತ್ತಿಲ್ಲ. ಸಂಸತ್ತಿನಲ್ಲಿ ಈ ವಿಷಯ ಚರ್ಚೆಯೇ ಆಗುತ್ತಿಲ್ಲ. ಅಲ್ಲಿ ಶಿಬು ಸೊರೇನ್– ಉಮಾಭಾರತಿ ಕುರಿತ ಚರ್ಚೆಗಳೇ ಆಗುತ್ತವೆ. ಕುಡಿಯುವ ನೀರಿನ, ನಿರುದ್ಯೋಗದ, ವಿದ್ಯಾರ್ಥಿಗಳ ಸಮಸ್ಯೆ ಚರ್ಚೆ ಆಗದಿರಲು ಜನಪರ ಕಾಳಜಿ ಇಲ್ಲದಿರುವುದೇ ಕಾರಣ ಎಂದು ಶಂಕರ್ ನುಡಿದರು.

■ **ಗುಣಮಟ್ಟ ಇಲ್ಲ:** ಕನ್ನಡ ದಿನಪತ್ರಿಕೆಗಳು ತಮ್ಮ ಗುಣಮಟ್ಟವನ್ನು ಹೆಚ್ಚಿಸಿಕೊಳ್ಳದಿದ್ದರೆ ಬೆಳೆಯಲು ಸಾಧ್ಯವಿಲ್ಲ ಎಂದು ಬೆಂಗಳೂರು ನಗರ ಪೋಲೀಸ್ ಆಯುಕ್ತ ಎಸ್. ಮರಿಸ್ವಾಮಿ ಅವರು ಹೇಳಿದರು.

ಕನ್ನಡ ಚಲನಚಿತ್ರಗಳು ಮತ್ತು ಕನ್ನಡ ದಿನ ಪತ್ರಿಕೆಗಳ ಗುಣಮಟ್ಟ ಕಡಿಮೆ. ಇಂಗ್ಲಿಷ್ ಪತ್ರಿಕೆಗಳಿಗೆ ಹೋಲಿಸಿದರೆ ಕನ್ನಡ ದಿನಪತ್ರಿಕೆಗಳ ಗುಣಮಟ್ಟ ತೀರಾ ಕಡಿಮೆ. ಕನ್ನಡದಲ್ಲಿ ನಿರ್ಮಾಣ ಆಗುವ 100 ಕ್ಕೆ 99 ಚಲನಚಿತ್ರಗಳು ನೋಡಲು ಅಸಾಧ್ಯವಾಗಿರುತ್ತವೆ ಎಂದು ಹೇಳಿದರು.

ಸಾಹಿತಿ ಮತ್ತು ಶೇಷಾದ್ರಿಪುರ ಕಾಲೇಜಿನ ಕನ್ನಡ ಮತ್ತು ಆಂಗ್ಲ ಸ್ನಾತಕೋತ್ತರ ವಿಭಾಗದ ಮುಖ್ಯಸ್ಥ ಪ್ರೊ।ದೊಡ್ಡರಂಗೇಗೌಡ ಅವರು ಮಾತನಾಡಿ, ಕನ್ನಡ ಪತ್ರಿಕೆಗಳು ರಾಜಕಾರಣಿಗಳು ಮತ್ತಿತರರು ಭಾಗವಹಿಸುವ ಕಾರ್ಯಕ್ರಮಗಳ ಭಾಷಣಗಳನ್ನು ಪ್ರಕಟ ಮಾಡುವುದನ್ನು ನಿಲ್ಲಿಸಿ ಜನಪರ ಕಾಳಜಿಯ ವಿಷಯಗಳ ಬಗ್ಗೆ ಹೆಚ್ಚಿನ ಗಮನ ಹರಿಸಬೇಕು ಎಂದು ಹೇಳಿದರು.

ಇತ್ತೀಚಿನ ದಿನಗಳಲ್ಲಿ ರಾಜಕಾರಣಿಗಳ ಭಾಷಣಗಳಿಗೆ ಹೆಚ್ಚಿಗೆ ಪ್ರಾಮುಖ್ಯ ನೀಡಿ, ಜನಪರ ಕಾಳಜಿಯ ವಿಷಯಗಳನ್ನು ಪ್ರಕಟಿಸುವುದನ್ನು ಕಡಿಮೆ ಮಾಡುತ್ತಿರುವುದು ವಿಷಾದನೀಯ ಎಂದು ಅವರು ತಿಳಿಸಿದರು.

ಶೇಷಾದ್ರಿಪುರ ಕಾಲೇಜಿನ ಗೌರವ ಕಾರ್ಯದರ್ಶಿ ಡಬ್ಲ್ಯು.ಪಿ.ಕೃಷ್ಣ ಅವರು ಕಾರ್ಯಕ್ರಮ ಉದ್ಘಾಟಿಸಿದರು.

ವಿಜಯ ಕರ್ನಾಟಕ
ಮಂಗಳವಾರ 24 ಆಗಸ್ಟ್ 2004 | 3

# 'ನಿರೀಕ್ಷೆ ಬದಲಾದರೆ ಪತ್ರಿಕೆಗಳೂ ಬದಲಾಗುತ್ತವೆ'

ಬೆಂಗಳೂರು,ಆ.23 - ಓದುಗರ ನಿರೀಕ್ಷೆಗಳು ಬದಲಾದಾಗ ಮಾತ್ರ ಪತ್ರಿಕಾ ಮಾಧ್ಯಮ ಜನಪರ ಕಾಳಜಿ ಹೊಂದಲು ಸಾಧ್ಯವಾಗುತ್ತದೆ ಎಂದು ವಿಧಾನ ಪರಿಷತ್ ಮಾಜಿ ಸಭಾಪತಿ ಬಿ.ಎಲ್.ಶಂಕರ್ ಅಭಿಪ್ರಾಯಪಟ್ಟರು.

ಶೇಷಾದ್ರಿಪುರಂ ಕಾಲೇಜಿನಲ್ಲಿ ನಡೆದ 'ಕನ್ನಡ ದಿನಪತ್ರಿಕೆಗಳು ಮತ್ತು ಜನಪರ ಕಾಳಜಿ' ಎಂಬ ವಿಚಾರಸಂಕಿರದಲ್ಲಿ ಸೋಮವಾರ ಅವರು ಮಾತನಾಡಿದರು.

ಓದುಗರು ಪತ್ರಿಕೆಗಳಿಂದ ಮನರಂಜನೆ, ಹಿಂಸೆ, ಹಾಗೂ ರಾಜಕೀಯ ಸುದ್ದಿಗಳನ್ನಷ್ಟೇ ನಿರೀಕ್ಷಿಸಿದಾಗ ಅದನ್ನೇ ಕೊಡುತ್ತವೆ. ಓದುಗರು ಬದಲಾಗಿ ಜನಪರ ಕಾಳಜಿ ರೂಢಿಸಿಕೊಂಡಾಗ ಪತ್ರಿಕೆಗಳೂ ಬದಲಾಗುತ್ತವೆ. ಓದುಗರ ನಿರೀಕ್ಷೆ ತಲುಪಲು ಯತ್ನಿಸುತ್ತಿರುವ ಪತ್ರಿಕೆಗಳು ಜನರ ಸಮಸ್ಯೆಗಳನ್ನು ಬಿಟ್ಟು ರಾಜಕೀಯ ಹೇಳಿಕೆಗಳಿಗೆ ಅನಗತ್ಯ ಪ್ರಚಾರ ನೀಡುತ್ತಿವೆ. ನೆರೆಯ ಕೇರಳ ರಾಜ್ಯ ಹಾಗೂ ತಮಿಳುನಾಡಿನಲ್ಲಿ ಆಯಾ ಭಾಷೆಯ ಪತ್ರಿಕೆಗಳು ಅಪಾರ ಪ್ರಸಾರ ಸಂಖ್ಯೆ ಹೊಂದಿವೆ. ಕೇರಳದಲ್ಲಿ ಮಲಯಾಳ ಮನೋರಮಾ ಪತ್ರಿಕೆಯ ಪ್ರಸಾರ ಸಂಖ್ಯೆ ಎಲ್ಲಾ ಕನ್ನಡ ಪತ್ರಿಕಗಳ ಒಟ್ಟಾರೆ ಪ್ರಸಾರ ಸಂಖ್ಯೆಗಿಂತ ದೊಡ್ಡದಿದೆ. ಕನ್ನಡಿಗರು ಕನ್ನಡ ಪತ್ರಿಕೆಗಳ ಬಗ್ಗೆಯೂ ಅಭಿಮಾನ ಶೂನ್ಯರಾಗಿರುವಂತೆ ತೋರುತ್ತಿದೆ. ಐದು ಕೋಟಿ ಕನ್ನಡಿಗರ ಸಂಖ್ಯೆಗೆ ಈಗಿನ ಕನ್ನಡ ಪತ್ರಿಕೆಗಳ ಪ್ರಸಾರ ಏನೇನೂ ಅಲ್ಲ . ಯುವ ಪೀಳಿಗೆಯಂತೂ ಇಂಗ್ಲಿಷ್ ಪತ್ರಿಕಗಳ ಕಡೆಗೆ ಹೆಚ್ಚು ಆಕರ್ಷಿತರಾಗುತ್ತಿರುವುದು ಕಳವಳಕಾರಿ ಎಂದು ಶಂಕರ್ ಹೇಳಿದರು.

ಇಂದು ಯಾವುದೇ ಕ್ಷೇತ್ರದಲ್ಲಿ ಜನಪರ ಕಾಳಜಿ ಇಲ್ಲವಾಗುತ್ತಿದೆ ಎಂದರೆ ಅದಕ್ಕೆ ಶಾಸನ ಸಭೆಯಲ್ಲಿ ಜನಪರ ಕಾಳಜಿ ಶೂನ್ಯವಾಗುತ್ತಿರುವುದೇ ಕಾರಣ. ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗ ಇವು ಮೂರೂ ಹೇಗೆ ವಿಫಲವಾಗಿವೆ ಎನ್ನುವುದಕ್ಕೆ ಸದ್ಯದ ಸಿಇಟಿ ಗೊಂದಲವೇ ಉದಾಹರಣೆ. ಜನಪ್ರತಿನಿಧಿಗಳಿಗೆ ಒಂದು ಕನಿಷ್ಠ ಪ್ರಮಾಣದ ಶೈಕ್ಷಣಿಕ ಹಿನ್ನೆಲೆ ಇರಬೇಕು. ಪದವೀಧರ ಕ್ಷೇತ್ರದ ಜನಪ್ರತಿನಿಧಿಗಳೂ ಎಷ್ಟೋ ಬಾರಿ ಹೆಬ್ಬೆಟ್ಟು ಒತ್ತುವವರಾಗಿದ್ದಾರೆ ಎಂದು ಶಂಕರ್ ವಿಷಾದಿಸಿದರು.

ಬೆಂಗಳೂರು ಪೊಲೀಸ್ ಆಯುಕ್ತ ಎಸ್.ಮರಿಸ್ವಾಮಿ ಮಾತನಾಡಿ, ಇಂದು ಪತ್ರಿಕೋದ್ಯಮ ಜಾಹೀರಾತಿನ ಮೇಲೆ ನಿಂತಿದೆ, ಜನಪರ ಕಾಳಜಿಗಳನ್ನಷ್ಟೇ ನೆಚ್ಚಿಕೊಂಡಿದ್ದ ಎಷ್ಟೋ ಪತ್ರಿಕೆಗಳು ಮುಚ್ಚಿಹೋಗಿವೆ ಎಂದರು. ಪತ್ರಿಕೆಗಳಿಗೆ ಜನಪರ ಕಾಳಜಿ ಜತೆಗೆ ಬದುಕುವ ಕಲೆ ಗೊತ್ತಿರಬೇಕು. ಆದರೆ, ಇತ್ತೀಚೆಗೆ ಪತ್ರಿಕೆಗಳಿಗೆ ದುಡ್ಡು ಕೊಟ್ಟು ಏನು ಬೇಕಾದರೂ ಬರೆಸಿಕೊಳ್ಳಬಹುದು ಎಂಬ ಪರಿಸ್ಥಿತಿ ಸೃಷ್ಟಿಯಾಗುತ್ತಿರುವುದು ಬೇಸರದ ಸಂಗತಿ ಎಂದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಕಾರ್ಯದರ್ಶಿ ಡಬ್ಲ್ಯು.ಪಿ.ಕೃಷ್ಣ, ವಕೀಲ ಹಾಗೂ ಅಂಕಣಕಾರ ರವಿಪ್ರಕಾಶ್, ಕಾಲೇಜಿನ ಪ್ರಾಂಶುಪಾಲ ಡಾ.ವಿ.ಎಲ್.ಎನ್.ಪ್ರಕಾಶ್, ಪತ್ರಿಕಾ ಚಳವಳಿ ಅಧ್ಯಕ್ಷ ಬಸವರಾಜ ದೊಡ್ಡಮನಿ, ಸ್ನಾತಕೋತ್ತರ ಕೇಂದ್ರದ ಮುಖ್ಯಸ್ಥ ಪ್ರೊ.ದೊಡ್ಡರಂಗೇಗೌಡ ಮತ್ತಿತರರು ಸಮಾರಂಭದಲ್ಲಿ ಹಾಜರಿದ್ದರು.

23-8-2004

ಬೆಂಗಳೂರು, ಆ.23: ಪತ್ರಿಕೆಗಳು ಸಮಾಜದ ಓರೆಕೋರೆಗಳನ್ನು ತಿದ್ದುವ ಪ್ರಬಲ ಅಸ್ತ್ರವಾಗಬೇಕು, ಅಷ್ಟೆ ಅಲ್ಲ ಪ್ರಜಾಪ್ರಭುತ್ವವನ್ನೇ ಎತ್ತಿಹಿಡಿಯುವ ಶಕ್ತಿಯಾಗಬೇಕು ಎಂದು ಶೇಷಾದ್ರಿಪುರ ಶಿಕ್ಷಣದತ್ತಿ ಕಾರ್ಯದರ್ಶಿ ಡಬ್ಲ್ಯೂ.ಪಿ.ಕೃಷ್ಣ ಇಂದಿಲ್ಲಿ ಕರೆ ನೀಡಿದರು.

ಪತ್ರಿಕಾ ಚಳವಳಿ ಹಾಗು ಶೇಷಾದ್ರಿಪುರಂ ಶಿಕ್ಷಣದತ್ತಿಯ ಸಂಯುಕ್ತಾಶ್ರಯದಲ್ಲಿ ನಡೆದ 'ಕನ್ನಡ ದಿನಪತ್ರಿಕೆಗಳು ಮತ್ತು ಜನಪದ ಕಾಳಜಿ' ವಿಚಾರ ಸಂಕಿರಣವನ್ನು ಉದ್ಘಾಟಿಸಿ ಅವರು ಮಾತನಾಡುತ್ತಿದ್ದರು.

ಪತ್ರಿಕೆಗಳು ಸಮಾಜಕ್ಕೆ ಸ್ಪಷ್ಟವಾದ ಹಾಗು ಒಳ್ಳೆಯ ಸಂದೇಶ ನೀಡುವ ಗುರಿಯನ್ನಿಟ್ಟುಕೊಂಡು ಮುನ್ನಡೆಯಬೇಕು. ಜನಪರ ಕಾಳಜಿ ಇಲ್ಲದ ಪತ್ರಿಕೆಗಳಿಗೆ ಯಾವತ್ತೂ ಭವಿಷ್ಯವಿಲ್ಲ. ಹಾಗಾಗಿ ಪತ್ರಿಕೆಯ ಸುದ್ದಿಗಳಲ್ಲಿ ಜನಪರತೆಯ ದನಿಯನ್ನು ತುಂಬಬೇಕಾದದ್ದು ಪತ್ರಿಕೆಗಳ ಕರ್ತವ್ಯವೆಂದರು.

ಇತ್ತೀಚೆಗೆ ಕೆಲವು ಪತ್ರಿಕೆಗಳು ವಿನಾಕಾರಣ ಸುದ್ದಿಯ ವೈಭವೀಕರಣ ಮಾಡಲು ಮುಂದಾಗುತ್ತಿವೆ ಹಾಗಾಗಬಾರದು



ಅಭಿವ್ಯಕ್ತಿ ಮಾಧ್ಯಮ ದುರುಪಯೋಗವಾಗದಂತೆ ನೋಡಿಕೊಳ್ಳಬೇಕು. ಇಂಗ್ಲಿಷ್ ಪತ್ರಿಕೆಗಳು ಕೇವಲ ನಗರಕ್ಕೆ ಮಾತ್ರ ಸೀಮಿತವಾಗುತ್ತಿವೆ. ಕನ್ನಡ ಪತ್ರಿಕೆಗಳು ಹಳ್ಳಿ ಹಳ್ಳಿಯ ಓದುಗರಿಗೆ ಮುಟ್ಟುತ್ತಿರುವುದು ಒಳ್ಳೆಯ ಬೆಳವಣಿಗೆ ಎಂದು ಹರ್ಷ ವ್ಯಕ್ತಪಡಿಸಿದರು.

ಸಮಾರಂಭದಲ್ಲಿ ನಗರ ಪೊಲೀಸ್ ಆಯುಕ್ತರಾದ ಎಸ್.ಮರಿಸ್ವಾಮಿ ಕಾನೂನು ಅಂಕಣಕಾರ ವಿ.ಎಲ್.ರವಿಪ್ರಕಾಶ್, ಸಾಹಿತಿ ಪ್ರೊ.ದೊಡ್ಡರಂಗೇಗೌಡ, ಮಾಜಿ ವಿಧಾನಪರಿಷತ್ ಸದಸ್ಯ ಬಿ.ಎಲ್.ಶಂಕರ್, ಪತ್ರಿಕಾ ಚಳವಳಿಯ ಅಧ್ಯಕ್ಷ ಬಸವರಾಜ ದೊಡ್ಡಮನಿ ಹಾಗು ಇತರರು ಭಾಗವಹಿಸಿದ್ದರು.

ನಮ್ಮ ಬೆಂಗಳೂರು

ಉದಯವಾಣಿ

ಆಗಸ್ಟ್ 19, 2004

# ಶೇಷಾದ್ರಿಪುರಂ ಕಾಲೇಜಿನ 'ಸ್ಕ್ರೈಬ್ಸ್' ಉದ್ಘಾಟನೆ



ಬೆಂಗಳೂರು

ಶೇಷಾದ್ರಿಪುರಂ ಕಾಲೇಜಿನ ಪತ್ರಿಕೋದ್ಯಮ ವಿಭಾಗದ ವಿದ್ಯಾರ್ಥಿಗಳ 'ಸ್ಕ್ರೈಬ್ಸ್' ಪತ್ರಿಕೋದ್ಯಮ ಸಂಘದ ಈ ವರ್ಷದ ಚಟುವಟಿಕೆಗಳಿಗೆ ಈಚೆಗೆ ಚಾಲನೆ ನೀಡಲಾಯಿತು.

'ದಿ ಹಿಂದೂ' ಪತ್ರಿಕೆಯ ಚೀಫ್ ಆಫ್ ನ್ಯೂಸ್‌ಬ್ಯೂರೋ ಮತ್ತು ಬೆಂಗಳೂರು ಪ್ರೆಸ್ ಕ್ಲಬ್ ಅಧ್ಯಕ್ಷರಾದ ಅರಕೆರೆ ಜಯರಾಮ್ ಜ್ಯೋತಿ ಬೆಳಗಿ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಅನಂತರ ಮಾತನಾಡುತ್ತಾ, ಪತ್ರಿಕೋದ್ಯಮದ ಇಂದಿನ ಸ್ಥಿತಿಗತಿಯ ಬಗ್ಗೆ ಬೆಳಕು ಚೆಲ್ಲಿದ ಅವರು ಒಬ್ಬ ಪತ್ರಿಕೋದ್ಯಮಿ ಹೇಗಿರಬೇಕು ಎನ್ನುವುದನ್ನು ವಿದ್ಯಾರ್ಥಿಗಳಿಗೆ ತಿಳಿಸಿದರು.

ತಮ್ಮ ವೃತ್ತಿ ಬದುಕಿನ ಕೆಲವು ಘಟನೆಗಳನ್ನು ಸ್ಮರಿಸಿದ ಅವರು ಕರ್ನಾಟಕದ ಕೆಲವು ಕನ್ನಡ ಹಾಗೂ ಇಂಗ್ಲಿಷ್ ಪತ್ರಕರ್ತರ ಬರವಣಿಗೆ ಶೈಲಿಯ ಬಗ್ಗೆ ವಿವರಿಸಿದರು. ಪೋಥನ್ ಜೋಸೆಫ್, ಸೀತಾರಾಮ್, ಪಿ.ಆರ್. ರಾಮಯ್ಯ ಮುಂತಾದವರು ಈ ಕ್ಷೇತ್ರದಲ್ಲಿ ಮಾಡಿದ ಸೇವೆಯನ್ನು ಅರಕೆರೆ ಜಯರಾಮ್ ಸ್ಮರಿಸಿದರು. 'ಇಂಥವರ ಕೆಲಸದಿಂದ ನಾವು ಸ್ಫೂರ್ತಿ ಪಡೆಯಬೇಕು. ಅವರಂತೆ ಸಾಮಾನ್ಯ ಜ್ಞಾನ, ಭಾಷೆಯ ಮೇಲಿನ ಹಿಡಿತ ಮತ್ತು ಬರೆಯುವ ಉತ್ಸಾಹವನ್ನು ಬೆಳೆಸಿಕೊಳ್ಳಬೇಕು' ಎಂದು ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು.

ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಕಾಲೇಜಿನ ಶಿಕ್ಷಣ ದತ್ತಿಯ ಕಾರ್ಯದರ್ಶಿ ಡಬ್ಲ್ಯೂ.ಪಿ. ಕೃಷ್ಣ, ಉಪ ಪ್ರಾಂಶುಪಾಲರಾದ ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ ಮತ್ತು ಪತ್ರಿಕೋದ್ಯಮ ವಿಭಾಗದ ಮುಖ್ಯಸ್ಥೆ ನಂದಿನಿ ಲಕ್ಷ್ಮೀಕಾಂತ ಉಪಸ್ಥಿತರಿದ್ದರು.

# ಕಡಿಮೆ ಬೆಲೆಗೆ ಪತ್ರಿಕೆಗಳಿಂದ ಜ್ಞಾನ ಪ್ರಸಾರ

ನೆಲಮಂಗಲ, ಆ.3- ಕಡಿಮೆ ಬೆಲೆಗೆ ಹೆಚ್ಚು ಜ್ಞಾನ ಕೊಡುವುದು ಪತ್ರಿಕೆಗಳಿಂದ ಮಾತ್ರ ಸಾಧ್ಯ ಎಂದು ಮಾಧ್ಯಮ ಅಕಾಡೆಮಿ ಅಧ್ಯಕ್ಷ ಹಾಗೂ 'ಸೂರ್ಯೋದಯ' ಪತ್ರಿಕೆ ಸಂಪಾದಕ ಎನ್ ಅರ್ಜುನದೇವ ಹೇಳಿದ್ದಾರೆ.

ಮಂಗಳವಾರ ಇಲ್ಲಿನ ಸಿದ್ಧಗಂಗಾ ಪ್ರಥಮ ದರ್ಜೆ ಕಾಲೇಜಿನಲ್ಲಿ ಏರ್ಪಡಿಸಲಾಗಿದ್ದ ಪತ್ರಿಕಾ ಚಳವಳಿ ಉದ್ಘಾಟನಾ ಸಮಾರಂಭದಲ್ಲಿ ಮಾತನಾಡಿದ ಅವರು ಪತ್ರಿಕೆ ಜ್ಞಾನ ಪ್ರಸಾರದ ಮಾಧ್ಯಮ.ಪ್ರಸ್ತುತ ಬೆಳವಣಿಗೆಗಳ ಪ್ರಿಯ ಹಾಗೂ ಅಪ್ರಿಯ ಸತ್ಯಗಳನ್ನು ಜನರಿಗೆ ತಲುಪಿಸುವ ಸಾಧನ.ಇಂದು ರೈತನ ಬೆಳೆ ಹಾಗೂ ಪತ್ರಿಕೆಗಳು ಮಾತ್ರ ಉತ್ಪಾದನಾ ವೆಚ್ಚಕ್ಕಿಂತ ಕಡಿಮೆ ಬೆಲೆಯಲ್ಲಿ ದೊರೆಯುತ್ತಿರುವ ವಸ್ತುಗಳು ಎಂದರು.

ದೃಶ್ಯ ಮಾಧ್ಯಮ , ಜ್ಞಾನ ಪ್ರಸಾರಕ್ಕಿಂತ ಮನರಂಜನೆಗೆ ಹೆಚ್ಚು ಪ್ರಾಮುಖ್ಯತೆ ನೀಡುತ್ತಿರುವುದರಿಂದ ಪತ್ರಿಕಾ ಮಾಧ್ಯಮದ ಜವಾಬ್ದಾರಿ ಈಗ ಇನ್ನೂ ಹೆಚ್ಚಾಗಿದೆ.ಓದುಗರು ಹೊಸ ಪತ್ರಿಕೆಗಳನ್ನು ಬೆಂಬಲಿಸಬೇಕು ಎಂದು ಅವರು ತಿಳಿಸಿದರು. ಸಮಾರಂಭ ಉದ್ಘಾಟಿಸಿ ಮಾತನಾಡಿದ ಸಿದ್ಧಗಂಗಾ ಮಠದ ಸಿದ್ಧಲಿಂಗ ಸ್ವಾಮೀಜಿ ವಿದ್ಯುನ್ಮಾನ ಪ್ರಗತಿಯಿಂದಾಗಿ ಪತ್ರಿಕೆಗಳನ್ನು ಓದುವ ಹವ್ಯಾಸ ಕಡಿಮೆಯಾಗುತ್ತಿದೆ.ದೃಶ್ಯ ಮಾಧ್ಯಮ ಜನರನ್ನು ಕೊಂಡೊಯ್ಯುತ್ತಿರುವ ಕಡೆಗೆ ನಾವು ಗಮನಹರಿಸಬೇಕು. ಮಕ್ಕಳ ಮೇಲೆ ಇದರಿಂದ ಉಂಟಾಗುತ್ತಿರುವ ಪರಿಣಾಮಗಳ ಬಗ್ಗೆ ಯೋಚಿಸಬೇಕು. ದುಶ್ಚಟಗಳಿಗೆ ಬಹಳ ಬೇಗ ಬಲಿಯಾಗುವ ಜನರು ಪತ್ರಿಕೆ ಓದುವಂತಹ ಒಳ್ಳೆಯ ಚಟಕ್ಕೆ ದಾಸರಾಗದಿರುವುದು ವಿಷಾದದ ಸಂಗತಿ ಎಂದರು.

ಪತ್ರಿಕಾ ಚಳವಳಿ ಅಧ್ಯಕ್ಷ ಬಸವರಾಜ ದೊಡ್ಡಮನಿ ಪ್ರಾಸ್ತಾವಿಕವಾಗಿ ಮಾತನಾಡಿ 'ಪ್ರತಿ ಓದುಗನಿಗೊಂದು ಪತ್ರಿಕೆ, ಪ್ರತಿ ಪತ್ರಿಕೆಗೊಬ್ಬ ಓದುಗ' ಚಳವಳಿಯ ಉದ್ದೇಶ ಎಂದರು.ಈ ಚಳವಳಿ ಮೂಲಕ ಗ್ರಾಮೀಣ ಹಾಗೂ ಕೊಳಗೇರಿ ಪ್ರದೇಶಗಳಲ್ಲಿ ಮೂರು ತಿಂಗಳ ಕಾಲ 50 ಪೈಸೆಗೆ ಪತ್ರಿಕೆ ಒದಗಿಸುವ ಮೂಲಕ ಅವರಲ್ಲಿ ಓದುವ ಹವ್ಯಾಸ ಬೆಳೆಸುವ ಪ್ರಯತ್ನ ಮಾಡಲಾಗುತ್ತಿದೆ.ಈಗಾಗಲೇ 750 ಹಳ್ಳಿಗಳಿಗೆ ಪತ್ರಿಕಾ ಚಳವಳಿ ಕಾಲಿಟ್ಟಿದೆ ಎಂದರು.

ಪತ್ರಿಕಾ ದಿನಾಚರಣೆ ಅಂಗವಾಗಿ ಏರ್ಪಡಿಸಿದ್ದ ಪ್ರಬಂಧ ಸ್ಪರ್ಧೆ ವಿಜೇತರಿಗೆ ಬಹುಮಾನ ವಿತರಿಸಲಾಯಿತು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳ ಗೌರವ ಕಾರ್ಯದರ್ಶಿ ಡಬ್ಲ್ಯು.ಸಿ. ಕೃಷ್ಣ, ನೆಲಮಂಗಲ ಸಬ್ ಇನ್‌ಸ್ಪೆಕ್ಟರ್ ಮಹಮದ್ ಬಾಷಾ, ಕಾಲೇಜಿನ ಪ್ರಾಂಶುಪಾಲ ಎಂ.ಪ್ರಸನ್ನಕುಮಾರ್ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.



ನೆಲ ಮಂಗಲದಲ್ಲಿ ಮಂಗಳವಾರ ನಡೆದ ಪತ್ರಿಕಾ ಚಳವಳಿ ಉದ್ಘಾಟನೆ ಕಾರ್ಯಕ್ರಮದಲ್ಲಿ ಸಿದ್ದಗಂಗಾಮಠದ ಶ್ರೀ ಸಿದ್ದಲಿಂಗಸ್ವಾಮಿ, ಸುರ್ಯೋದಯ ಪತ್ರಿಕೆ ಸಂಪಾದಕ ಎನ್.ಅರ್ಜುನದೇವ, ಶೇಷಾದ್ರಿಪುರಂ ಕಾಲೇಜು ಪ್ರಾಂಶುಪಾಲ ಪ್ರಸನ್ನಕುಮಾರ, ಗೌರವ ಕಾರ್ಯದರ್ಶಿ ಕೃಷ್ಣ ಭಾಗವಹಿಸಿದ್ದರು.

ಉದಯವಾಣಿ ನಮ್ಮ ಬೆಂಗಳೂರು ಜುಲೈ 26, 2004

# ಮಾನವೀಯ ಮೌಲ್ಯಗಳನ್ನು ಅಳವಡಿಸಿಕೊಳ್ಳಲು ಕರೆ




ಶೇಷಾದ್ರಿಪುರಂ

ವಿದ್ಯಾರ್ಥಿಗಳು ವಿದ್ಯಾರ್ಜನೆಯ ಜತೆಗೆ ಮಾನವೀಯ ಮೌಲ್ಯಗಳನ್ನು ಅಳವಡಿಸಿಕೊಳ್ಳಬೇಕು ಎಂದು ಹಿರಿಯ ಸಾಹಿತಿ ಪ್ರೊ। ದೊಡ್ಡರಂಗೇಗೌಡ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಶೇಷಾದ್ರಿಪುರಂ ಸಂಜೆ ಪದವಿ-ಪೂರ್ವ ಕಾಲೇಜಿನಲ್ಲಿ ಇತ್ತೀಚೆಗೆ ಪ್ರಥಮ ಪಿ.ಯು.ಸಿ. ತರಗತಿಗಳನ್ನು ಉದ್ಘಾಟಿಸಿ ಮಾತನಾಡಿದ ಅವರು, ಸಂಜೆಯ ಹೊತ್ತು ವಿದ್ಯೆ ಎಂಬ ಬೆಳಕನ್ನು ಕಾಣಲು ಬಂದ ವಿದ್ಯಾರ್ಥಿಗಳು, ಗಳಿಕೆ ಮತ್ತು ಕಲಿಕೆ ಎರಡನ್ನೂ ಪಡೆಯಲು ಅವಕಾಶ ಪಡೆದಿದ್ದಾರೆ. ಸೋಮಾರಿತನವನ್ನು ಮೈಗೂಡಿಸಿಕೊಂಡು ಬೆಳಿಗ್ಗೆ ತಡವಾಗಿ ಎದ್ದು ಆಲಸ್ಯದಿಂದಿದ್ದರೆ ಸಾಧನೆಯಾಗುವುದಿಲ್ಲ ಎಂದು ತಿಳಿಸಿದರು.

ವಿದ್ಯಾರ್ಥಿಗಳು ಕನಸ್ಸು ಕಾಣಬೇಕು ಮತ್ತು ಅದನ್ನು ಸಾಕಾರಗೊಳಿಸಲು ಪ್ರಯತ್ನಿಸಬೇಕು. ಇಲ್ಲಿರುವಂತ ಅವಕಾಶಗಳು ಇನ್ನೆಲ್ಲಿಯೂ ಸಿಗುವುದಿಲ್ಲ. ವಿದ್ಯಾರ್ಥಿಯು ಒಬ್ಬ ತಪಸ್ವಿಯ ಹಾಗೆ ಚಂಚಲ ಮನಸ್ಸನ್ನು ಹತೋಟಿಯಲ್ಲಿಡಬೇಕು. ಮಾನಸಿಕ ಹಿಡಿತ ಮತ್ತು ಆತ್ಮವಿಶ್ವಾಸದಿಂದಿರುವವನು ಮಾತ್ರ ಜ್ಞಾನವನ್ನು ಸಂಪಾದಿಸಿ ಜೀವನದಲ್ಲಿ ಮೇಲೇರಲು ಸಾಧ್ಯ ಎಂದು ಹೇಳಿದರು.

ಪಠ್ಯಪುಸ್ತಕಗಳ ಹೊರತಾಗಿ ಇತರ ಹವ್ಯಾಸಗಳನ್ನೂ ವಿದ್ಯಾರ್ಥಿಗಳು ಬೆಳೆಸಿಕೊಳ್ಳಬೇಕು. ಅಮೆರಿಕದಲ್ಲಿ ತರುಣ-ತರುಣಿಯರು ಇತರೆ ಸಂಘ-ಸಂಸ್ಥೆಗಳಿಗೆ ಸದಸ್ಯರಾಗಿ ತಮ್ಮ ಬಿಡುವಿನ ವೇಳೆಯಲ್ಲಿ ಸಕ್ರಿಯರಾಗಿ ಸಮಾಜಸೇವೆ ಮಾಡುತ್ತಾರೆ ಎಂದು ಪ್ರೊ। ದೊಡ್ಡರಂಗೇಗೌಡ ತಿಳಿಸಿದರು.

ಸಮಾರಂಭದಲ್ಲಿ ಸಂಜೆ ಪದವಿಪೂರ್ವ ಕಾಲೇಜಿನ ಪ್ರಾಂಶುಪಾಲರಾದ ಪ್ರೊ। ಎನ್. ಬೈರೇಗೌಡ, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ಕೆ.ಎಂ. ನಂಜಪ್ಪ, ಪ್ರಧಾನ ಕಾರ್ಯದರ್ಶಿಗಳಾದ ಡಬ್ಲ್ಯೂ.ಪಿ. ಕೃಷ್ಣ, ಸಂಜೆ ಕಾಲೇಜಿನ ಆಡಳಿತ ಸಲಹಾ ಪರಿಷತ್ತಿನ ಅಧ್ಯಕ್ಷ ಎಂ. ಗೋಪಾಲ್, ಧರ್ಮದರ್ಶಿಗಳಾದ ಎ.ಆರ್. ಕೃಷ್ಣ ಮುಂತಾದವರು ಉಪಸ್ಥಿತರಿದ್ದರು.

# ರೆಡ್ ಕ್ರಾಸ್ ಸಂಸ್ಥೆಯ ಚುನಾವಣೆಯಲ್ಲಿ ಸಹಕಾರಿ ಧುರೀಣ ಆರ್ ಕೃಷ್ಣ

*ಶ್ರೀ ಆರ್. ಕೃಷ್ಣರವರ ದಕ್ಷ, ಸೇವಾ ಮನೋಭಾವನೆಯ ವೈಖರಿಯಿಂದಾಗಿ ಕಳೆದ ವರ್ಷ ಮುಖ್ಯಮಂತ್ರಿ ಎಸ್.ಎಂ. ಕೃಷ್ಣರವರು ಇವರ ಸಾಧನೆಯನ್ನು ಪರಿಗಣಿಸಿ, 2001-2002ನೇ ಸಾಲಿನ ಅತ್ಯುತ್ತಮ ಸಹಕಾರಿ ಬ್ಯಾಂಕ್ ಪ್ರಶಸ್ತಿಯನ್ನು ನೀಡಿದ್ದರು. ಪತ್ರಕರ್ತರ ವೇದಿಕೆಯು ಕರುನಾಡ ಭೂಷಣ, ಬೆಂಗಳೂರು ಮಹಾನಗರ ಪಾಲಿಕೆಯು ಕೆಂಪೇಗೌಡ ಪ್ರಶಸ್ತಿ, ಅತಿಮಬ್ಬೆ ಪ್ರತಿಷ್ಠಾನದವರು ಕರ್ನಾಟಕ ಪ್ರಗತಿ ರತ್ನ ಪ್ರಶಸ್ತಿ, ಮುಂತಾದ ಪ್ರತಿಷ್ಠಿತ ಪ್ರಶಸ್ತಿಗಳನ್ನು ನೀಡಿ ಸನ್ಮಾನಿಸಿವೆ. ಇಂದು ಆರ್. ಕೃಷ್ಣರವರು ಭಾರತೀಯ ರೆಡ್‌ಕ್ರಾಸ್ ಸಂಸ್ಥೆ (ಕರ್ನಾಟಕ ಆಡಳಿತ ಮಂಡಳಿಯ ಚುನಾವಣೆ)ಗೆ ಪದಾಧಿಕಾರಿಯಾಗಲು ಚುನಾವಣೆಗೆ ನಿಂತಿದ್ದಾರೆ...*



ಇಂದು ಬೆಂಗಳೂರು ಸಿಟಿ ಕೋ-ಆಪರೇಟಿವ್ ಬ್ಯಾಂಕ್ ಲಿಮಿಟೆಡ್ ಪ್ರಗತಿಪಥದತ್ತ ಮುನ್ನಡೆಯಲು ಶ್ರಮಿಸಿದವರಲ್ಲಿ ಸಹಕಾರಿ ಧುರೀಣ, ಕರ್ನಾಟಕ ಅತ್ಯುತ್ತಮ ಸಹಕಾರಿ ಬ್ಯಾಂಕ್ ಪ್ರಶಸ್ತಿಯನ್ನು ನೀಡಿದ್ದರು.

ಈ ಪ್ರಶಸ್ತಿ ಪಡೆಯುವಲ್ಲಿ ಆರ್. ಕೃಷ್ಣರವರ ಶ್ರಮ ಅಭಿನಂದನೀಯ. ದಿ ಬೆಂಗಳೂರು ಸಿಟಿ ಕೋ-ಆಪರೇಟಿವ್ ಬ್ಯಾಂಕಿಗೆ 1984, 1992, 2002ರಲ್ಲಿ ಮೂರು ಅವಧಿಗೆ ಅಧ್ಯಕ್ಷರಾದ ಹಿರಿಮೆ ಆರ್. ಕೃಷ್ಣರವರದ್ದು. ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದಲ್ಲಿ ಸಹಾಯಕ ಆಡಳಿತಾಧಿಕಾರಿಯಾಗಿ ತಮ್ಮ ದಕ್ಷ ಸೇವೆಯಿಂದ ನಿವೃತ್ತರಾದ ಆರ್.ಕೃಷ್ಣರವರು, ಇಂದು ಬೆಂಗಳೂರಿನ ಪ್ರತಿಷ್ಠಿತ ಶೇಷಾದ್ರಿಪುರಂ ಶಿಕ್ಷಣ ದತ್ತಿಯಲ್ಲಿ 1982ರಿಂದಲೂ ಧರ್ಮದರ್ಶಿಗಳಾಗಿದ್ದಾರೆ.

ಇವರ ಸೇವಾ ಮನೋಭಾವ ಹಾಗೂ ದಕ್ಷತೆಯನ್ನು ಪರಿಗಣಿಸಿ, ಪತ್ರಕರ್ತರ ವೇದಿಕೆಯು ಕರುನಾಡ ಭೂಷಣ, ಬೆಂಗಳೂರು ಮಹಾನಗರ ಪಾಲಿಕೆಯು ಕೆಂಪೇಗೌಡ ಪ್ರಶಸ್ತಿ, ಅತಿಮಬ್ಬೆ ಪ್ರತಿಷ್ಠಾನದವರು ಕರ್ನಾಟಕ ಪ್ರಗತಿ ರತ್ನ ಪ್ರಶಸ್ತಿ, ಮುಂತಾದ ಪ್ರತಿಷ್ಠಿತ ಪ್ರಶಸ್ತಿಗಳನ್ನು ನೀಡಿ ಸನ್ಮಾನಿಸಿವೆ.

ಇಂದು ಆರ್. ಕೃಷ್ಣರವರು ಭಾರತೀಯ ರೆಡ್‌ಕ್ರಾಸ್ ಸಂಸ್ಥೆ (ಕರ್ನಾಟಕ ಆಡಳಿತ ಮಂಡಳಿಯ ಚುನಾವಣೆ)ಗೆ ಪದಾಧಿಕಾರಿಯಾಗಲು ಚುನಾವಣೆಗೆ ನಿಂತಿದ್ದಾರೆ. ಈ ಚುನಾವಣೆಯ ಇದೇ 20.6.2004ರಂದು ಮಧ್ಯಾಹ್ನ 12-00 ರಿಂದ ಸಂಜೆ 4.00ರವರೆಗೆ ಗುರು ನಾನಕ್ ಭವನ್‌ನಲ್ಲಿ ನಡೆಯಲಿದೆ. ಆರ್. ಕೃಷ್ಣ, ಸಿ.ಪಿ. ಸರೋಜ, ಡಬ್ಲ್ಯೂ.ಪಿ. ಕೃಷ್ಣ, ಎಚ್.ಕೆ. ನಾಗರಾಜ್, ಎಂ. ನಾಗರಾಜ್, ಮಧುರಾ ಅಶೋಕ್ ಕುಮಾರ್‌ರವರನ್ನು ಒಳಗೊಂಡ ಸಿಂಡಿಕೇಟ್ ಈ ಬಾರಿ ಚುನಾವಣೆಯಲ್ಲಿ ಗೆಲ್ಲುವ ಹಂತದಲ್ಲಿದೆ.

ಈ ಸಿಂಡಿಕೇಟ್‌ನಲ್ಲಿರುವಂತಹ ಪ್ರತಿಯೊಬ್ಬರೂ ಸೇವಾ ಮನೋಭಾವದವರಾಗಿದ್ದು, ಪ್ರಗತಿ ಪಥದಲ್ಲಿ ಯೋಚಿಸುವಂತಹ ಉತ್ತಮ ಅಭಿರುಚಿಯುಳ್ಳವರು.

ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ಸದಸ್ಯರು ಆರ್.ಕೃಷ್ಣ ನೇತೃತ್ವದ ಈ ಸಿಂಡಿಕೇಟ್‌ಗೆ ಮತ ನೀಡಿ, ಅವರನ್ನು ಜಯಶೀಲರನ್ನಾಗಿಸಬೇಕೆಂಬುದು ಈ ಲೇಖನದ ಆಶಯ. ಈಗಾಗಲೇ ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ನ್ಯೂಸ್ ಲೆಟರ್ ಸಂಪಾದಕೀಯ ಮಂಡಳಿಯ ಸದಸ್ಯರಾಗಿ ಆರ್.ಕೃಷ್ಣರವರು, ನಗರಾದ್ಯಂತ ಅನೇಕ ಸಂಘ - ಸಂಸ್ಥೆಗಳ ಪದಾಧಿಕಾರಿಗಳಾಗಿ ತಮ್ಮ ಗುರುತರ ಜವಾಬ್ದಾರಿಯಿಂದಾಗಿ ನಾಡಿನಾದ್ಯಂತ ಗುರುತಿಸಿಕೊಂಡವರು.

ಈ ಹಿನ್ನೆಲೆಯಲ್ಲಿ ಈ ಬಾರಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಸದಸ್ಯರು ಈ ಸಿಂಡಿಕೇಟ್‌ಗೆ ಮತ ನೀಡಿ ಅವರನ್ನು ಜಯಶೀಲರನ್ನಾಗಿ ಮಾಡಬೇಕೆಂಬುದು ನಮ್ಮೆಲ್ಲರ ಅಭಿಮತ.

-ಮಹೇಶ್ ಸು[illegible]



**Please cast your valuable vote in favour of**

| | | |
|---|---|---|
| 5 | AAR KRISHNA<br>ಆರ್ ಕೃಷ್ಣ | X |
| 6 | KRISHNA W. P.<br>ಕೃಷ್ಣ ಡಬ್ಲ್ಯೂ. ಪಿ. | X |
| 7 | MADHURA ASHOK KUMAR<br>ಮಧುರ ಅಶೋಕ್ ಕುಮಾರ್ | X |
| 9 | M. NAGARAJ<br>ಎಂ. ನಾಗರಾಜ್ | X |
| 10 | Dr. H. K. NAGARAJ<br>ಡಾ|| ಹೆಚ್. ಕೆ. ನಾಗರಾಜ್ | X |
| 18 | C. P. SAROJA<br>ಸಿ. ಪಿ. ಸರೋಜ | X |



ಭೂಷಣ ಪ್ರಶಸ್ತಿ ವಿಜೇತ ಆರ್. ಕೃಷ್ಣರವರು ಒಬ್ಬರು.

ಇಂದಿಗೆ 72 ವಸಂತಗಳನ್ನು ಕಂಡಿರುವ ಇವರಿಗೆ ಸಹಕಾರಿ ಕ್ಷೇತ್ರದಲ್ಲಿ ಅಪಾರ ಅನುಭವ ಹೊಂದಿದ್ದಾರೆ. ಆ ಅನುಭವವನ್ನು ಸಹಕಾರಿ ಕ್ಷೇತ್ರದಲ್ಲಿ ಧಾರೆಯೆರೆಯುತ್ತಿದ್ದಾರೆ. ಆದ್ದರಿಂದಲೇ ದಿ. ಸಿಟಿ ಕೋ-ಆಪರೇಟಿವ್ ಬ್ಯಾಂಕ್ ಇಂದು 40753 ಸದಸ್ಯತ್ವ ಹೊಂದಿದ್ದು, ಬೆಂಗಳೂರಿನಾದ್ಯಂತ 12 ಶಾಖೆಗಳನ್ನು ಹೊಂದಿದೆ.



ಶ್ರೀ ಆರ್. ಕೃಷ್ಣರವರ ದಕ್ಷ, ಸೇವಾ ಮನೋಭಾವನೆಯ ವೈಖರಿಯಿಂದಾಗಿ ಕಳೆದ ವರ್ಷ ಮುಖ್ಯಮಂತ್ರಿ ಎಸ್.ಎಂ. ಕೃಷ್ಣರವರು ಇವರ ಸಾಧನೆಯನ್ನು ಪರಿಗಣಿಸಿ, 2001-2002ನೇ ಸಾಲಿನ



**Aar Krishna**, B.A., B.Com.
Assistant Administrative Officer (Rtd.)
University of Agricultural Sciences, Hebbal
Veteran Co-operator & Social Worker,
Member, Editorial Board, Newsletter
Indian Red Cross Society (Karnataka)

| | |
|---|---|
| President | : The Bangalore City Co-operative Bank Limited (Founded in 1905) |
| President | : Sri Vinayaka Temple, R. T. Nagar |
| Member | : Karnataka Ithihasa Academy |
| Council Member | : The Mysore Horticultural Society |
| Executive Committee Member | : Karnataka State Private Educational Institutions Association |
| Member | : Bharat Seva Dal (Karnataka Unit) |
| Member | : Bharat Education Society, Jayanagar |
| Life Member | : Karnataka Voluntary Blood Donors' Association |
| Recipient | : Kempe Gowda Award (2003) for distinguished contribution in the field of Co-operation from the *Bangalore Mahanagara Palike* |
| Honours | : Honoured by several organisations for services in the field of Co-operation |

Residence : 13/2(6), 3rd Cross, 1st Main, K.H.M. Block Ganganagar, Bangalore - 560 032 ☎ 2333 1889

**Dr. H. K. Nagaraj**
M.B.B.S., M.S., M.Ch. (Urology). F.I.C.S.
Professor & Head, Urology
M.S. Ramaiah Institute of Nephro-Urology
Managing Body Member
Indian Red Cross Society
Karnataka State Branch

| | |
|---|---|
| Vice-President | : Membership Sub-Committee, Indian Red Cross Society, Karnataka State Branch |
| Organizing Secretary | : 29th Annual Conference of Urological Society of India (1996) |
| Member | : Indian Medical Association |
| Member | : Urological Society of India |
| Member | : International College of Surgeons, Indian Section |
| Recipient | : Gold Medal for outstanding research in Urology from the Rotary International (1997)<br>Best Scientific Paper Award from the Bangalore Surgical Society (1988) |
| Honours | : Invited for the *Teaching Program* at Rose Medical Center, Denver, USA (1996) |

Residence : 8, 15th Cross, Eswara Layout, Indiranagar Bangalore - 560 038 ☎ 5299247 Mobile : 31823797

**C. P. Saroja**, M.A
Blood Donor Motivator &
Women Welfare Activist
Wife of Sri K. M. Nanjappa, Former Mayor & Veteran Leader of the Red Cross Movement in Karnataka

| | |
|---|---|
| President | *Sandhya Deepa* (A Home for the Aged Women) |
| Director | : All India Women's Conference |
| Director | *Saheli* – an organization for the Upliftment of women and children |
| Trustee | Seshadripuram Educational Trust |
| Chairperson, Betterment Committee | Seshadripuram Stree Samaja School<br>Seshadripuram Girls' High School<br>Seshadripuram English Primary School |
| Vice-President | Basavanagudi Stree Samaja |
| President | Lions Club of Bangalore Mahanagara |
| Chief Patron | Spoorthi Mohila Samaja |

Residence [illegible] Fort Temple Road, Hanumanthanagar Bangalore [illegible]
☎ [illegible]

**W. P. Krishna**
B.E., M.I.E. (Ind.), F.I.I.P.E., F.I.V., LL.B.
Consulting Engineer, Educationalist
Social Worker and Humanist
Director, The Mysore Stoneware Pipes & Potteries Limited
Hon. Treasurer, Indian Red Cross Society, Karnataka State Branch

| | |
|---|---|
| Vice-President | Karnataka Voluntary Blood Donors' Association |
| Member | : Red Cross Home Development Committee |
| Hon. General Secretary | : Seshadripuram Group of Educational Institutions |
| Hon. Treasurer | Gandhi Peace Foundation, Bangalore Centre |
| Central Committee Member | Bharat Seva Dal (*Founded by Dr. N.S. Hardikar*) |
| Chairman | Sadashivanagar Educational Institutions |
| Trustee *(Govt. Nominee)* | Srinivasa Mandiram and Charities, Balepet |
| Past Managing Director | The Nehrunagar Co-operative Bank Ltd., |
| Trustee | Appavu Pillai Educational Institutions, Tasker Town |
| Trustee | : Navajeevana Physical Culture Institute |
| Founder Secretary | Karnataka Private Post-Graduate Colleges' Association |
| Recipient | ➤ State Award (1992) for Youth and Community Services from the *Government of Karnataka*<br>➤ Seva Shree Award (1999) from *Vivekananda Kala Kendra* (State Award Winning Organisation)<br>➤ *Chief of Indian Delegation, Indo-Sri Lanka Youth Exchange Programme* 2000<br>➤ Kempe Gowda Award [illegible] for services in the field of Education from the *Bangalore Mahanagara Palike* |

[illegible]

**Madhura Ashok Kumar**, B.A.
*Veeragase* Artiste & Blood Donor Activist
Member, Membership Sub-Committee & Editorial Board, Newsletter Indian Red Cross Society (Karnataka)

| | |
|---|---|
| Vice-President | : Lions Club of Bangalore Madhavanagar |
| Committee Member | : Karnataka Voluntary Blood Donors' Association |
| Life Member | : Indian Society of Blood Transfusion and Immunohaematology, Karnataka |
| Former President | Akkamahadevi Mahila Samaja, Almatti |
| Trustee | Siddhavana Trust |
| Vice-President | Smruthi Mahila Samaja |
| Central Committee Member | : St John Ambulance Association |
| Recipient | Dr. B. R. Ambedkar Award - 2003 from *Kannada Sahitya Parishat*, Goa |

[illegible] 4th Main [illegible]
☎ [illegible]

**M. Nagaraj**, B.Com.
Asst. Manager, Apex Bank
Social Worker
Former Member, Blood Bank [illegible] Committee and Women & C[illegible] Welfare Sub-Committee, Indian [illegible] Cross Society (Karnataka)

| | |
|---|---|
| General Secretary | : Karnataka State Apex Bank Employees' Association |
| Secretary | Karnataka Co-operative Bank Employees' Federation |
| Former Member | : Board of Visitors, Minto Eye Hospital |
| Former Member | Board of Visitors, Ghousia Hospital |
| Convenor | Kempegowdanagar Citizens' Forum |
| Trustee | Kempegowdanagar Maramma Temple Trust |
| Honours | : Honoured by several organizations for services rendered to the society |

Residence : 242 [illegible] Floor), 5th Cross, 4th M[illegible] [illegible]nagar Bangalore - 560 019
☎ [illegible]

# ಪಠ್ಯದ ಹೊರತಿನ ಓದೇ ನಿಜವಾದ ವಿದ್ಯಾಭ್ಯಾಸ

ಬೆಂಗಳೂರು : ಪಠ್ಯಪುಸ್ತಕದ ಹೊರತಾಗಿ ಏನನ್ನು ಓದುವಿರೋ ಅದು ನಿಜವಾದ ವಿದ್ಯಾಭ್ಯಾಸ. ಅದೇ ನಿಮ್ಮ ಜೀವನವನ್ನು ನಿರ್ಧರಿಸುತ್ತದೆ ಎಂದು ಪ್ರೊ. ಜಿ.ಕೆ. ಗೋವಿಂದ ರಾವ್ ವಿದ್ಯಾರ್ಥಿಗಳಿಗೆ ಕರೆ ನೀಡಿದ್ದಾರೆ.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಮಾಗಡಿ ರಸ್ತೆಯಲ್ಲಿರುವ ಸ್ವತಂತ್ರ ಪದವಿಪೂರ್ವ ಕಾಲೇಜಿನಲ್ಲಿ ಪ್ರಥಮ ಪಿಯುಸಿ ತರಗತಿಗಳ ಉದ್ಘಾಟನಾ ಸಮಾರಂಭದಲ್ಲಿ ಅವರು ಮಾತನಾಡುತ್ತಿದ್ದರು.

ಮೊದಲು ಮನುಷ್ಯನಾಗಬೇಕು, ಪ್ರಕೃತಿಯೊಂದಿಗಿನ ನಮ್ಮ ಸಂಬಂಧ ಹಸಿರಾಗಿ ಉಳಿಯಬೇಕು. ಶಿಕ್ಷಣ ಕೇವಲ ವಿಷಯ ಸಂಗ್ರಹವಲ್ಲ, ಅದೊಂದು ಅನುಭವ ಕೂಡಾ. ಮನುಷ್ಯನಿಗೆ ಗೊಂದಲ ಇರಬೇಕು,



ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಮಾಗಡಿ ರಸ್ತೆಯಲ್ಲಿರುವ ಸ್ವತಂತ್ರ ಪದವಿಪೂರ್ವ ಕಾಲೇಜಿನಲ್ಲಿ ಪ್ರಥಮ ಪಿಯುಸಿ ತರಗತಿಗಳ ಉದ್ಘಾಟನಾ ಸಮಾರಂಭದಲ್ಲಿ ಸುರೇಖಾ, ಬಿ.ವಿ. ಅನಂತರಾಮ್, ಆರ್. ಕೃಷ್ಣ ಕೆ.ಎಂ. ನಂಜಪ್ಪ, ವಿ. ಅನಂತ ರಾಮಯ್ಯ, ಜಿ.ಕೆ. ಗೋವಿಂದರಾವ್, ಡಬ್ಲ್ಯು.ಪಿ. ಕೃಷ್ಣ ಭಾಗವಹಿಸಿದ್ದರು.

ಆದರೆ ಆ ಗೊಂದಲ ಕ್ರಿಯಾಶೀಲತೆಯನ್ನು ಉಂಟು ಮಾಡುವಂತಿರಬೇಕು ಎಂದು ಹೇಳಿದರು.

ವಿ. ಅನಂತರಾಮಯ್ಯ ಮಾತನಾಡಿ, ಮಕ್ಕಳನ್ನು, ಅದರಲ್ಲೂ ಹದಿಹರೆಯದವರನ್ನು ಪೋಷಕರು ಅರ್ಥಮಾಡಿಕೊಳ್ಳಬೇಕು. ಹೆಚ್ಚು ಸಮಯವನ್ನು ತಮ್ಮ ಮಕ್ಕಳೊಂದಿಗೆ ಕಳೆಯಬೇಕು. ಇತರ ಮಕ್ಕಳೊಂದಿಗೆ ಹೋಲಿಕೆ ಮಾಡದೆ, ನಿರಾಸೆ ನಕಾರಗಳನ್ನು ಎದುರಿಸುವುದನ್ನು ಮಕ್ಕಳಿಗೆ ಕಲಿಸಬೇಕು ಎಂದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಕೆ.ಎಂ. ನಂಜಪ್ಪ ಅಧ್ಯಕ್ಷತೆ ವಹಿಸಿದ್ದರು. ದತ್ತಿಯ ಗೌರವ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ ಉಪಸ್ಥಿತರಿದ್ದರು. ಕಾಲೇಜಿನ ಪ್ರಾಂಶುಪಾಲ ಪ್ರೊ. ಎಸ್. ಉಮಾಶಂಕರ್ ಸ್ವಾಗತಿಸಿದರು.

ಬೆಂಗಳೂರು ವಿಜಯ
ಸೋಮವಾರ 5 ಜುಲೈ 2004



ಶೇಷಾದ್ರಿಪುರಂ ಕಾಲೇಜು ಪ್ರಥಮ ಪದವಿ ಪ್ರಾರಂಭೋತ್ಸವದಲ್ಲಿ ಅನೂಪ್ ಕೆ. ಪೂಜಾರಿ, ಡಾ. ವಿ.ಎಸ್. ಪ್ರಸಾದ್, ಕೆ.ಎಂ. ನಂಜಪ್ಪ, ಡಬ್ಲ್ಯು.ಪಿ. ಕೃಷ್ಣ ಹಾಜರಿದ್ದರು.

# ಗುಣಮಟ್ಟ ಕಾಪಾಡಲು ವಿವಿ ವಿಭಜನೆ ಸಲ್ಲ

ಬೆಂಗಳೂರು: ವಿಶ್ವವಿದ್ಯಾಲಯದ ಗುಣಮಟ್ಟ ಸುಧಾರಿಸಬೇಕಿದ್ದರೆ ಅದನ್ನು ಎರಡು ಭಾಗ ಮಾಡುವ ಬದಲಾಗಿ ಕಾರ್ಯವೈಖರಿಯಲ್ಲಿ ಗಂಭೀರ ಬದಲಾವಣೆ ಮಾಡಬೇಕು ಎಂದು ಬೆಂಗಳೂರು ವಿವಿ ರಿಜಿಸ್ಟ್ರಾರ್ ಅನುಪ್ ಕೆ. ಪೂಜಾರಿ ಅಭಿಪ್ರಾಯಪಟ್ಟಿದ್ದಾರೆ.

ಶೇಷಾದ್ರಿಪುರಂ ಪದವಿ ಕಾಲೇಜಿನ ಪ್ರಥಮ ಪದವಿ ತರಗತಿಗಳ ಉದ್ಘಾಟನೆ ಸಮಾರಂಭದಲ್ಲಿ ಭಾಗವಹಿಸಿದ್ದ ಅವರು ನಂತರ ಕಾಲೇಜು ಸಿಬ್ಬಂದಿಯೊಡನೆ ವಿಚಾರ-ವಿನಿಮಯ ನಡೆಸಿದರು.

ಪರೀಕ್ಷೆ, ಮೌಲ್ಯಮಾಪನ, ಫಲಿತಾಂಶ, ಬಿಲ್ಲುಗಳ ವಿಲೇವಾರಿ, ಸಂಶೋಧನೆ ಹೀಗೆ ಶೈಕ್ಷಣಿಕ ವರ್ಗಕ್ಕೆ ಸಂಬಂಧಿಸಿದ ಹತ್ತಾರು ಸಮಸ್ಯೆಗಳ ಬಗ್ಗೆ ಮುಕ್ತವಾಗಿ ಚರ್ಚಿಸಿದ ಪೂಜಾರಿ, ವಿವಿ ಮಟ್ಟದ ಸುಧಾರಣೆಗೆ ಎಲ್ಲರೂ ಒಟ್ಟಾಗಿ ಶ್ರಮಿಸಬೇಕು. ಹೊಸ ಪದ್ಧತಿಯನ್ನು ಮುಕ್ತ ಮನಸ್ಸಿನಿಂದ ಸ್ವೀಕರಿಸಬೇಕು. ಮೌಲ್ಯಮಾಪನದಲ್ಲಿನ ವಿಳಂಬದ ಕುರಿತ ಪ್ರಸ್ತಾವನೆಗೆ ಮೌಲ್ಯಮಾಪನ ಸ್ಥಳಗಳ ವಿಕೇಂದ್ರೀಕರಣವಾಗಬೇಕು. ಕೆಲಸಕ್ಕೆ ಕಾಲೇಜುಗಳ ಪ್ರಾಂಶುಪಾಲರು ಜವಾಬ್ದಾರಿ ತೆಗೆದುಕೊಳ್ಳಲು ಮುಂದೆ ಬರಬೇಕು ಎಂದರು.

ಕಾಲೇಜಿನ ಪ್ರಥಮ ಪದವಿ ತರಗತಿಗಳಿಗೆ ಚಾಲನೆ ನೀಡಿದ ಅವರು, ಕಾಲೇಜು ಒಂದು ಕುಟುಂಬವಿದ್ದಂತೆ; ಪ್ರತಿಯೊಬ್ಬರ ಸಹಭಾಗಿತ್ವದ ಅವಶ್ಯಕತೆ ಇಲ್ಲಿದೆ. ಕಾಲೇಜು ಜೀವನ ವಿದ್ಯಾರ್ಥಿಗೆ ಸ್ವಾತಂತ್ರ್ಯ ನೀಡುತ್ತಾದರೂ, ಆ ಸ್ವಾತಂತ್ರ್ಯವನ್ನು ವಿದ್ಯಾರ್ಥಿ ಸೂಕ್ತ ರೀತಿಯಲ್ಲಿ ಬಳಸಿಕೊಳ್ಳಬೇಕೆಂದು ವಿದ್ಯಾರ್ಥಿಗಳಿಗೆ ಎಚ್ಚರಿಕೆ ನೀಡಿದರು.

ನ್ಯಾಷನಲ್ ಅಸೆಸ್‌ಮೆಂಟ್ ಮತ್ತು ಅಕ್ರೆಡಿಟೇಷನ್ ಕೌನ್ಸಿಲ್ ನಿರ್ದೇಶಕ ಡಾ. ವಿ.ಎಸ್. ಪ್ರಸಾದ್ ಮಾತನಾಡಿ, ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ಯಶಸ್ವಿಯಾಗಬೇಕೆಂದರೆ ಬಹುಭಾಷೆಯಲ್ಲಿ ಜ್ಞಾನ ಮತ್ತು ಪುಸ್ತಕಗಳ ಹೊರಗೆ ದೊರಕುವ ಜೀವನ ಪಾಠದಿಂದ ಮಾತ್ರ ಸಾಧ್ಯ. 'ಗುರುಕುಲ' ಪದ್ಧತಿ ಇಂದು ನಮ್ಮಲ್ಲಿಲ್ಲವಾದರೂ ವಿದ್ಯಾರ್ಥಿಗಳು 'ಗುರುಕುಲ' ಪದ್ಧತಿಯಲ್ಲಿದ್ದಷ್ಟೇ ಗಂಭೀರವಾಗಿ ಅಭ್ಯಾಸದಲ್ಲಿ ತೊಡಗಬೇಕು ಎಂದು ವಿದ್ಯಾರ್ಥಿಗಳಿಗೆ ಕರೆ ನೀಡಿದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಕೆ.ಎಂ. ನಂಜಪ್ಪ, ಗೌರವ ಪ್ರಧಾನ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ, ಪ್ರಾಂಶುಪಾಲ ಡಾ. ಸಿ.ಎಲ್.ಎನ್. ಪ್ರಕಾಶ್, ಆಡಳಿತ ಮಂಡಳಿ ಅಧ್ಯಕ್ಷ ಪ್ರೊ. ಸಿ.ಎಲ್. ಬಸವರಾಜಯ್ಯ ಭಾಗವಹಿಸಿದ್ದರು.

ಕರ್ನಾಟಕ ಬೆಟಾಲಿಯನ್‌ನ ಎನ್‌ಸಿಸಿ ಮುಖ್ಯಸ್ಥ ಕೋ. ಥಾಪಾ ಕಾರ್ಯಕ್ರಮದಲ್ಲಿ ಭಾಗವಹಿಸಿ ವಿದ್ಯಾರ್ಥಿಗಳಿಗೆ ಎನ್‌ಸಿಸಿ ಸೇರುವಂತೆ ಸಲಹೆ ನೀಡಿದರು.

ಪುಟ 2 ಪ್ರಜಾವಾಣಿ, ಸೋಮವಾರ 5ನೇ ಜುಲೈ 2004

## ಶೇಷಾದ್ರಿಪುರಂ ಸಂಜೆ ಕಾಲೇಜಿನ ಪದವಿ ತರಗತಿ ಉದ್ಘಾಟನೆ

ಜುಲೈ 1ರಂದು ಶೇಷಾದ್ರಿಪುರಂ ಸಂಜೆ ಪದವಿಪೂರ್ವ ಕಾಲೇಜಿನ ಪ್ರಥಮ ಪದವಿ ತರಗತಿಗಳನ್ನು ಕರ್ನಾಟಕ ಹೈಕೋರ್ಟ್‌ನ ನಿರ್ವತ್ತ ನ್ಯಾಯಾಧೀಶ ಎ. ಸದಾಶಿವ ಉದ್ಘಾಟಿಸಿದರು. ಅವರು, 'ಸಮಾಜದಲ್ಲಿ ಪ್ರಾಮಾಣಿಕತೆಯನ್ನು ಗುರುತಿಸುವ ಪ್ರವೃತ್ತಿ ಕಡಿಮೆ ಆಗುತ್ತಿದೆ' ಎಂದು ಖೇದ ವ್ಯಕ್ತಪಡಿಸಿದರು. 'ಇಂದಿನ ವಿದ್ಯಾರ್ಥಿಗಳಿಗೆ ಹೆಚ್ಚಿನ ಸವಲತ್ತು ದೊರಕುತ್ತಿದೆ. ಅದರ ಸದುಪಯೋಗ ಆಗಬೇಕು' ಎಂದು ಕರೆ ನೀಡಿದರು.

ಸಮಾರಂಭದಲ್ಲಿ ಡಬ್ಲ್ಯೂ.ಪಿ. ಕೃಷ್ಣ, ಎಂ.ಎಸ್. ನಟರಾಜ್, ಕೆ.ಎಂ. ನಂಜುಂಡಪ್ಪ, ಪ್ರಾಚಾರ್ಯ ಪ್ರೊ ಎಸ್.ಜಿ. ಮಣೂರ್, ಪ್ರೊ ಬಿ.ಆರ್. ಲಕ್ಷ್ಮಣ್, ಆರ್. ಶ್ರೀನಾಥ್ ಮತ್ತು ಪ್ರೊ ಚಂದ್ರಿಕಾ ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ, ಬೆಂಗಳೂರು

5-7-2004

# ಕೆ-ಮ್ಯಾಟ್ ಪರೀಕ್ಷೆಗೆ 3000 ಅಭ್ಯರ್ಥಿಗಳು

ಬೆಂಗಳೂರು, ಜು. 4- ರಾಜ್ಯದ ಸುಮಾರು 40 ಖಾಸಗಿ ಎಂಬಿಎ ಕಾಲೇಜುಗಳವರು ಸಂಯುಕ್ತವಾಗಿ ಇಂದು ಕಾಲೇಜು ಪ್ರವೇಶದ 'ಕೆ-ಮ್ಯಾಟ್' ಪರೀಕ್ಷೆ ನಡೆಸಿದರು. ಕರ್ನಾಟಕವೂ ಸೇರಿದಂತೆ ರಾಷ್ಟ್ರದ ವಿವಿಧ ಕಡೆಗಳಿಂದ ಸುಮಾರು 3000 ಅಭ್ಯರ್ಥಿಗಳು ಭಾಗವಹಿಸಿದ್ದು, ಪರೀಕ್ಷೆ 7 ಕೇಂದ್ರಗಳಲ್ಲಿ ನಡೆಯಿತು ಎಂದು ಕರ್ನಾಟಕ ಖಾಸಗಿ ಸ್ನಾತಕೋತ್ತರ ಕಾಲೇಜುಗಳ ಸಂಘದ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ ತಿಳಿಸಿದ್ದಾರೆ.

ಆಡಳಿತ ವರ್ಗದ ಪ್ರವೇಶಗಳಿಗೆ ಈ ಪರೀಕ್ಷೆ ನಡೆದಿದ್ದು ಫಲಿತಾಂಶವನ್ನು ಮೂರು ದಿನಗಳಲ್ಲಿ ಪ್ರಕಟಿಸಲಾಗುವುದು. ಸರ್ಕಾರದ ಅನುಮತಿ ದೊರೆತ ಮೇಲೆ ಕೇಂದ್ರೀಕೃತ ಪ್ರವೇಶ ನೀಡಿಕೆ ಕಾರ್ಯಕ್ರಮ ಆರಂಭವಾಗುವುದು. ವಿದ್ಯಾರ್ಥಿಗಳು ತಮ್ಮ ರ್‍ಯಾಂಕ್‌ಗಳನ್ನು www.kppgea.org ಮೂಲಕ ನೋಡಬಹುದು ಎಂದು ಹೇಳಿದ್ದಾರೆ.

# ಕಾರ್ಯವೈಖರಿ ಬದಲಾವಣೆ: ವಿವಿ ಗುಣಮಟ್ಟ ಸುಧಾರಣೆ

ಬೆಂಗಳೂರು, ಜುಲೈ 2– 'ವಿಶ್ವವಿದ್ಯಾಲಯದ ಕಾರ್ಯವೈಖರಿಯಲ್ಲಿ ಗಂಭೀರ ಬದಲಾವಣೆ ಮಾಡುವುದರಿಂದ ಅದರ ಗುಣಮಟ್ಟವನ್ನು ಸುಧಾರಿಸಬಹುದು' ಎಂದು ಬೆಂಗಳೂರು ವಿಶ್ವವಿದ್ಯಾಲಯದ ಕುಲಸಚಿವ ಅನುಪ್ ಕೆ ಪೂಜಾರಿ ಗುರುವಾರ ಇಲ್ಲಿ ಅಭಿಪ್ರಾಯಪಟ್ಟರು.

ಅವರು ಶೇಷಾದ್ರಿಪುರಂ ಪದವಿ ಕಾಲೇಜಿನ ಪ್ರಥಮ ಪದವಿ ತರಗತಿಗಳ ಉದ್ಘಾಟನಾ ಸಮಾರಂಭದ ನಂತರ ಕಾಲೇಜಿನ ಸಿಬ್ಬಂದಿಗಳೊಡನೆ ನಡೆದ ವಿಚಾರ ವಿನಿಮಯ ಕಾರ್ಯಕ್ರಮದಲ್ಲಿ ಮಾತನಾಡಿದರು.

ಪರೀಕ್ಷೆ, ಮೌಲ್ಯಮಾಪನ, ಫಲಿತಾಂಶ, ಬಿಲ್ಲುಗಳ ವಿಲೇವಾರಿ, ಸಂಶೋಧನೆ ಮುಂತಾದ ಶಿಕ್ಷಣಕ್ಕೆ ಸಂಬಂಧಿಸಿದ ಸಮಸ್ಯೆಗಳ ಬಗ್ಗೆ ಕಾಲೇಜಿನ ಸಿಬ್ಬಂದಿಗಳೊಡನೆ ಮುಕ್ತವಾಗಿ ಚರ್ಚಿಸಿದ ಅವರು ವಿವಿ ಅಳವಡಿಸಿರುವ ಹೊಸ ಪದ್ಧತಿಯನ್ನು ಮುಕ್ತ ಮನಸ್ಸಿನಿಂದ ಸ್ವೀಕರಿಸಿ ಶಿಕ್ಷಣದ ಗುಣಮಟ್ಟದ ಸುಧಾರಣೆಗೆ ಒಟ್ಟಾಗಿ ಶ್ರಮಿಸಲು ಕರೆನೀಡಿದರು.

ಸಮಾರಂಭದಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ಕೆ.ಎಂ. ನಂಜಪ್ಪ, ಗೌರವ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ, ಪ್ರಾಂಶುಪಾಲ ಸಿ.ಎಲ್.ಎನ್. ಪ್ರಕಾಶ್, ಆಡಳಿತ ಮಂಡಳಿ ಅಧ್ಯಕ್ಷ ಪ್ರೊ ಸಿ.ಎಲ್. ಬಸವರಾಜಯ್ಯ ಉಪಸ್ಥಿತರಿದ್ದರು.

ವಿಜಯ ಕರ್ನಾಟಕ 02/07/04

# ಪ್ರವೇಶ ಪರೀಕ್ಷೆ 4ರಂದು

ಬೆಂಗಳೂರು, ಜು. 1 - ಎಂ.ಬಿ.ಎ. ಕೋರ್ಸ್‌ಗೆ ಆಡಳಿತ ಮಂಡಳಿಯು ಶೇ.50ರಷ್ಟು ಸೀಟುಗಳನ್ನು ಕೆ-ಮಾಟ್ ಪ್ರವೇಶ ಪರೀಕ್ಷೆಯ ಮೂಲಕ ಭರ್ತಿ ಮಾಡಲು ಕರ್ನಾಟಕ ಖಾಸಗಿ ಸ್ನಾತಕೋತ್ತರ ಕಾಲೇಜುಗಳ ಸಂಘ ನಿರ್ಧರಿಸಿದೆ.

ಸುಪ್ರೀಂ ಕೋರ್ಟ್ ಆದೇಶದಂತೆ ರಾಜ್ಯ ಸರಕಾರದ ನಿಯಮದಡಿ ಪ್ರವೇಶ ಪರೀಕ್ಷೆ ನಡೆಸಲಾಗುವುದು. ನ್ಯಾಯಮೂರ್ತಿ ಎಸ್. ವೆಂಕಟ ರಾಮನ್ ಸಮಿತಿ ಪ್ರವೇಶ ಪರೀಕ್ಷೆ ಪಾರದರ್ಶಕವಾಗಿ ನಡೆಯುವಂತೆ ಮೇಲ್ವಿಚಾರಣೆ ವಹಿಸಲಿದೆ ಎಂದು ಸಂಘದ ಕಾರ್ಯದರ್ಶಿ ಡಬ್ಲ್ಯೂ.ಪಿ. ಕೃಷ್ಣ ಸುದ್ದಿಗೋಷ್ಠಿಯಲ್ಲಿ ಬುಧವಾರ ತಿಳಿಸಿದರು.

ಈಗಾಗಲೇ ಸುಮಾರು 3000 ಸಾವಿರ ವಿದ್ಯಾರ್ಥಿಗಳು ಪರೀಕ್ಷೆಗೆ ಅರ್ಜಿ ಸಲ್ಲಿಸಿದ್ದಾರೆ. ಸರಕಾರ ನಿಗದಿ ಪಡಿಸಿರುವ ಆಡಳಿತ ಮಂಡಳಿಯ ಶೇ.50ರಷ್ಟು ಸ್ಥಾನಗಳನ್ನು ಭರ್ತಿ ಮಾಡಲು ಕೆ-ಮಾಟ್ ಮಾನದಂಡ ವಾಗಿದೆ.

ರಾಜ್ಯದಲ್ಲಿನ ವಿಶ್ವ ವಿದ್ಯಾಲಯಗಳ ಖಾಸಗಿ ಕಾಲೇಜುಗಳ ಆಡಳಿತ ಮಂಡಳಿಯಲ್ಲಿರುವ 1200 ಸೀಟುಗಳಿಗೆ ಕೆ-ಮಾಟ್‌ನಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಪ್ರವೇಶ ಕಲ್ಪಿಸಲಾಗುತ್ತದೆ ಎಂದು ಹೇಳಿದರು.

ಹೊರ ರಾಜ್ಯದ ವಿದ್ಯಾರ್ಥಿಗಳು ರಾಜ್ಯದಲ್ಲಿ ತೆರೆಯಲಾಗಿರುವ ಎಂಟು ಪರೀಕ್ಷಾ ಕೇಂದ್ರಗಳಲ್ಲಿಯೇ ಪ್ರವೇಶ ಪರೀಕ್ಷೆ ಬರೆಯಬೇಕು.

ಜು.4ರಂದು ಮಧ್ಯಾಹ್ನ ಪರೀಕ್ಷೆ ನಡೆಯಲಿದೆ. ಫಲಿತಾಂಶವನ್ನು ಎರಡು ದಿನ ದೊಳಗೆ ವೆಬ್ ಸೈಟ್‌ನಲ್ಲಿ ಪ್ರಕಟಿಸಲಾಗುವುದು.

ವಿಳಾಸ www.kppgca.org ಕೌನ್ಸೆಲಿಂಗ್ ಮೂಲಕ ಸೂಕ್ತ ಕಾಲೇಜುಗಳನ್ನು ಆಯ್ಕೆ ಮಾಡಿ ಕೊಳ್ಳಲು ವಿದ್ಯಾರ್ಥಿಗಳಿಗೆ ಅವಕಾಶವಿದೆ ಎಂದು ತಿಳಿಸಿದರು.

ಹೆಚ್ಚಿನ ಮಾಹಿತಿಗಾಗಿ ಶೇಷಾದ್ರಿ ಪುರಂ ಪ್ರಥಮ ದರ್ಜೆ ಕಾಲೇಜು, ಪ್ರಾಂಶುಪಾಲ ಡಾ. ಎಂ. ಪ್ರಕಾಶ್ 9243106796 ಮತ್ತು ಸಿ.ಎಂ.ಐ.ಟಿ. ಕಾಲೇಜು ನಿರ್ದೇಶಕ ಡಾ. ಎಸ್.ಕೆ. ಪ್ರಸಾದ್ 9845327656 ಅವರನ್ನು ಸಂಪರ್ಕಿಸಲು ಕೋರಿದೆ.

ಸಂಯುಕ್ತ ಕರ್ನಾಟಕ, ಬೆಂಗಳೂರು

1-7-2004

# ಎಂಬಿಎ ಕೋರ್ಸ್‌ಗೆ ಪ್ರವೇಶ ಪರೀಕ್ಷೆ

ಬೆಂಗಳೂರು, ಜೂ. 30- ಕರ್ನಾಟಕ ಖಾಸಗಿ ಸ್ನಾತಕೋತ್ತರ ಕಾಲೇಜುಗಳ ಸಂಘ 2004-05ನೇ ಸಾಲಿನಲ್ಲಿ ಎಂಬಿಎ ಕೋರ್ಸಿಗೆ ಪ್ರವೇಶ ಪರೀಕ್ಷೆಯನ್ನು ಜುಲೈ 4 ರಂದು ನಡೆಸಲು ನಿರ್ಧರಿಸಿದೆ.

ಸುಪ್ರೀಂ ಕೋರ್ಟಿನ ಆದೇಶದ ಪ್ರಕಾರ ಕರ್ನಾಟಕ ಸರ್ಕಾರ ಆದೇಶಿಸಿರುವ ಮಿತಿಯೊಳಗೆ ಈ ಪ್ರವೇಶ ಪರೀಕ್ಷೆ ನಡೆಯಲಿದೆ ಎಂದು ಕರ್ನಾಟಕ ಖಾಸಗಿ ಸ್ನಾತಕೋತ್ತರ ಕಾಲೇಜುಗಳ ಸಂಘದ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ ಪತ್ರಿಕಾಗೋಷ್ಠಿಯಲ್ಲಿಂದು ತಿಳಿಸಿದರು.

ಪ್ರವೇಶ ಪರೀಕ್ಷೆ ಬೆಂಗಳೂರಿನ ಸಿಎಂಆರ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್, ದಯಾನಂದ ಸಾಗರ್ ಕಾಲೇಜ್ ಆಫ್ ಮ್ಯಾನೇಜ್‌ಮೆಂಟ್ ಸ್ಟಡೀಸ್, ಶೇಷಾದ್ರಿಪುರಂ ಶಿಕ್ಷಣ ದತ್ತಿ, ದಾವಣಗೆರೆಯ ಬಾಪೂಜಿ ಇನ್‌ಸ್ಟಿಟ್ಯೂಟ್ ಆಫ್ ಎಂಜಿನಿಯರಿಂಗ್ ಅಂಡ್ ಟೆಕ್ನಾಲಜಿ, ಗುಲ್ಬರ್ಗದ ದೊಡ್ಡ ಅಪ್ಪ ಇನ್‌ಸ್ಟಿಟ್ಯೂಟ್ ಆಫ್ ಎಂಬಿಎ, ಬಳ್ಳಾರಿಯ ವಿಜಯನಗರ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಹಾಗೂ ಮಂಗಳೂರಿನ ಶ್ರೀನಿವಾಸ ಕಾಲೇಜ್ ಆಫ್ ಪಿ.ಜಿ. ಮ್ಯಾನೇಜ್‌ಮೆಂಟ್ ಸ್ಟಡೀಸ್‌ನಲ್ಲಿ ಮಧ್ಯಾಹ್ನ 2 ರಿಂದ 4 ಗಂಟೆಯವರೆಗೆ ನಡೆಯಲಿದೆ ಎಂದವರು ತಿಳಿಸಿದರು. ಜುಲೈ 3 ಮತ್ತು 4 ರಂದು ವಿದ್ಯಾರ್ಥಿಗಳಿಗೆ ಮಾಹಿತಿಯನ್ನು ಸಂಘದ, ಕೇಂದ್ರ ಕಚೇರಿಯಲ್ಲಿ ನೀಡಲಾಗುವುದು ಎಂದವರು ತಿಳಿಸಿ ಹೆಚ್ಚಿನ ಮಾಹಿತಿಗಾಗಿ: 92431-06796 ಮತ್ತು 98453-27656 ಸಂಪರ್ಕಿಸಬಹುದು ಎಂದರು.

# ಜು.೪ಕ್ಕೆ ಎಂಬಿಎ ಕೋರ್ಸ್ ಕುರಿತ 'ಕೆ.ಮ್ಯಾಟ್-೨೦೦೪' ಪ್ರವೇಶ ಪರೀಕ್ಷೆ

ಬೆಂಗಳೂರು, ಜೂ.೩೦- ಕರ್ನಾಟಕ ಖಾಸಗಿ ಸ್ನಾತಕೋತ್ತರ ಕಾಲೇಜುಗಳ ಸಂಘದ ವ್ಯಾಪ್ತಿಗೆ ಬರುವ ಕಾಲೇಜುಗಳಲ್ಲಿನ ೨೦೦೪-೦೫ನೇ ಸಾಲಿನ ಎಂಬಿಎ ಕೋರ್ಸ್ ಕುರಿತ 'ಕೆ.ಮ್ಯಾಟ್-೨೦೦೪' ಪ್ರವೇಶ ಪರೀಕ್ಷೆಯು ಜುಲೈ ೪ ರಂದು ರಾಜ್ಯದ ೭ ಕೇಂದ್ರಗಳಲ್ಲಿ ನಡೆಯಲಿದೆ ಎಂದು ಸಂಘದ ಕಾರ್ಯದರ್ಶಿ ಡಬ್ಲ್ಯೂ. ಪಿ.ಕೃಷ್ಣ ಇಂದಿಲ್ಲಿ ತಿಳಿಸಿದ್ದಾರೆ.

ಪತ್ರಿಕಾಗೋಷ್ಠಿಯಲ್ಲಿ ಮಾತನಾಡುತ್ತಿದ್ದ ಅವರು, ಸುಪ್ರೀಂಕೋರ್ಟ್ ಆದೇಶದ ಪ್ರಕಾರ (೨ನೆ ಪುಟಕ್ಕೆ)

ಕರುನಾಡ ಸಂಜೆ
30-6-2004

# ಜುಲೈ 4ರಂದು ಎಂಬಿಎಗೆ ಕೆ-ಮ್ಯಾಟ್ ಪ್ರವೇಶ ಪರೀಕ್ಷೆ

ಬೆಂಗಳೂರು, ಜೂ. 30: ಕರ್ನಾಟಕ ಖಾಸಗಿ ಸ್ನಾತಕೋತ್ತರ ಕಾಲೇಜುಗಳ ಸಂಘವು 2004-05ನೇ ಸಾಲಿನ ಎಂಬಿಎ ಕೋರ್ಸ್‌ಗೆ ಕೆ-ಮ್ಯಾಟ್ ಮಾದರಿಯ ಪ್ರವೇಶ ಪರೀಕ್ಷೆಯನ್ನು ಜುಲೈ ನಾಲ್ಕರಂದು ನಡೆಸಲಿದೆ.

ಸುಪ್ರೀಂ ಕೋರ್ಟ್ ಆದೇಶದ ಮೇರೆಗೆ ಕರ್ನಾಟಕ ಸರ್ಕಾರ ನೀಡಿದ ಸೂಚನೆ ಹಿನ್ನೆಲೆಯಲ್ಲಿ ಈ ಪ್ರವೇಶ ಪರೀಕ್ಷೆ ನಡೆಸುವ ತೀರ್ಮಾನ ಕೈಗೊಳ್ಳಲಾಗಿದೆ ಎಂದು ಸಂಘದ ಕಾರ್ಯದರ್ಶಿ ಡಬ್ಲ್ಯೂ. ಪಿ. ಕೃಷ್ಣ ಇಂದು ಪತ್ರಿಕಾಗೋಷ್ಠಿಯಲ್ಲಿ ತಿಳಿಸಿದರು.

ಸರ್ಕಾರ ನಿಗದಿಪಡಿಸಿರುವ ಆಡಳಿತ ಮಂಡಳಿಗಳ ಶೇ. 50ರಷ್ಟು ಸೀಟುಗಳ ಪಾಲನ್ನು ಭರ್ತಿ ಮಾಡಲು ಈ ಪ್ರವೇಶ ಪರೀಕ್ಷೆ ಮಾನದಂಡವಾಗಲಿದೆ ಎಂದ ಅವರು, ಈಗಾಗಲೇ ಸುಮಾರು ಮೂರು ಸಾವಿರ ವಿದ್ಯಾರ್ಥಿಗಳು ಪ್ರವೇಶ ಪರೀಕ್ಷೆಗೆ ಅರ್ಜಿ ಸಲ್ಲಿಸಿದ್ದಾರೆ ಎಂದು ವಿವರ ನೀಡಿದರು.

1200 ಸೀಟುಗಳನ್ನು ಭರ್ತಿ ಮಾಡಿಕೊಳ್ಳಲಾಗುವುದು ಎಂದ ಅವರು, ಜುಲೈ ನಾಲ್ಕರಂದು ಪರೀಕ್ಷೆ ನಡೆಯಲಿದ್ದು, ಮೂರು ದಿನಗಳೊಳಗೆ ಫಲಿತಾಂಶ ಪ್ರಕಟಿಸುವುದಾಗಿ ಹೇಳಿದರು.

### ಪರೀಕ್ಷಾ ಕೇಂದ್ರಗಳು

ನಗರದ ದಯಾನಂದ ಸಾಗರ ಕಾಲೇಜು, ಶೇಷಾದ್ರಿ ಪುರಂ ಕಾಲೇಜು, ಸಿಎಂಆರ್ ಸ್ನಾತಕೋತ್ತರ ಕಾಲೇಜು, ದಾವಣಗೆರೆಯ ಬಾಪೂಜಿ ಇಂಜಿನಿಯರಿಂಗ್ ಕಾಲೇಜು, ಗುಲ್ಬರ್ಗಾದ ದೊಡ್ಡಪ್ಪ ಅಪ್ಪ ಶಿಕ್ಷಣ ಸಂಸ್ಥೆ, ಬಳ್ಳಾರಿಯ ವಿಜಯನಗರ ಇಂಜಿನಿಯರಿಂಗ್ ಕಾಲೇಜು ಹಾಗು ಮಂಗಳೂರಿನ ಶ್ರೀನಿವಾಸ ಕಾಲೇಜುಗಳಲ್ಲಿ ಪ್ರವೇಶ ಪರೀಕ್ಷೆಗಳನ್ನು ನಡೆಸಲಾಗುವುದು ಎಂದು ಕೃಷ್ಣ ತಿಳಿಸಿದರು.

ಪತ್ರಿಕಾಗೋಷ್ಠಿಯಲ್ಲಿ ಸಂಚಾಲಕರಾದ ಎಸ್.ಕೆ. ಪ್ರಸಾದ್ ಹಾಗು ಎಂ. ಪ್ರಕಾಶ್ ಉಪಸ್ಥಿತರಿದ್ದರು.

ಕರುನಾಡ ಸಂಜೆ

30-6-2004

# ಪದವಿ ತರಗತಿ ಉದ್ಘಾಟನೆ

ಬೆಂಗಳೂರು, ಜೂ. 30: ನಗರದ ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜು ಪ್ರಸಕ್ತ ಶೈಕ್ಷಣಿಕ ಸಾಲಿನಲ್ಲಿ ಪದವಿ ತರಗತಿಗಳ ಉದ್ಘಾಟನಾ ಕಾರ್ಯಕ್ರಮ ನಾಳೆ ನಡೆಯಲಿದೆ.

ಸಂಜೆ 6ಗಂಟೆಗೆ ಕಾಲೇಜು ದತ್ತಿ ಸಭಾಂಗಣದಲ್ಲಿ ನಡೆಯಲಿರುವ ಸಮಾರಂಭದಲ್ಲಿ ನಿವೃತ್ತ ನ್ಯಾಯಮೂರ್ತಿ ಎ.ಜೆ. ಸದಾಶಿವ ಮುಖ್ಯ ಅತಿಥಿಗಳಾಗಿ ಆಗಮಿಸಲಿದ್ದು, ಸಂಸ್ಥೆಯ ಅಧ್ಯಕ್ಷ ಕೆ.ಎಂ. ನಂಜಪ್ಪ ಅಧ್ಯಕ್ಷತೆ ವಹಿಸಲಿದ್ದಾರೆ. ಡಬ್ಲ್ಯೂ.ಪಿ. ಕೃಷ್ಣ ವಿಶೇಷ ಆಹ್ವಾನಿತರಾಗಿದ್ದಾರೆ.

# ವಾಣಿಜ್ಯ ಉದ್ದೇಶಕ್ಕೆ ರೆಡ್‌ಕ್ರಾಸ್ ಚಿಹ್ನೆ: ವಿಷಾದ

ಬೆಂಗಳೂರು, ಜೂನ್ 28- 'ಮಾನವೀಯತೆ, ನಿಷ್ಪಕ್ಷಪಾತ, ಮತ್ತು ತಾಟಸ್ಥ್ಯದ ಸಂಕೇತವಾದ ರೆಡ್‌ಕ್ರಾಸ್ ಚಿಹ್ನೆ ಇಂದು ವಾಣಿಜ್ಯ ಉದ್ದೇಶಗಳಿಗಾಗಿ ಬಳಕೆ ಆಗುತ್ತಿರುವುದು ದುರದೃಷ್ಟಕರ' ಎಂದು ಅಂತರ್‌ರಾಷ್ಟ್ರೀಯ ರೆಡ್‌ಕ್ರಾಸ್ ಸಮಿತಿಯ ಪ್ರಾದೇಶಿಕ ಸಹಕಾರ ಪ್ರತಿನಿಧಿ ಓಫ್ಲೋರ್ಬುರ್ಲ್ಕೆನ್ ವುಬೊಡೊ ವಿಷಾದ ವ್ಯಕ್ತಪಡಿಸಿದರು.

'ವೈದ್ಯಕೀಯ ವೃತ್ತಿನಿರತರು ಮತ್ತು ಔಷಧಿ ವ್ಯಾಪಾರಸ್ಥರು ರೆಡ್‌ಕ್ರಾಸ್ ಚಿಹ್ನೆಯ ದುರ್ಬಳಕೆ ಮಾಡುತ್ತಿರುವುದರಿಂದ ಸಂಸ್ಥೆಯ ಮೂಲ ಧ್ಯೇಯಕ್ಕೆ ಧಕ್ಕೆ ಉಂಟಾಗಿದ್ದು, ಸಂಸ್ಥೆಯ ಅನನ್ಯತೆಯನ್ನು ಕಾಯ್ದುಕೊಳ್ಳಲು ಕಷ್ಟ ಆಗುತ್ತಿದೆ. ಇದು ದಂಡನಾರ್ಹ ಅಪರಾಧವಾದರೂ, ಜನರೊಂದಿಗೆ ಸಂಘರ್ಷ ನಡೆಸುವುದು ನಮ್ಮ ಉದ್ದೇಶವಲ್ಲದ ಕಾರಣ ನಾವು ಅರಿವು ಮೂಡಿಸುವ ಮೂಲಕ ಸಮಸ್ಯೆಯನ್ನು ಬಗೆಹರಿಸಲು ಬಯಸುತ್ತೇವೆ' ಎಂದು ಇಂದು ಇಲ್ಲಿ ನಡೆದ ಸುದ್ದಿಗೋಷ್ಠಿಯಲ್ಲಿ ವುಬೊಡೊ ತಿಳಿಸಿದರು.

ರೆಡ್‌ಕ್ರಾಸ್ ಸಂಸ್ಥೆಯ ದೆಹಲಿ ಮುಖ್ಯಾಲಯದ ಮಾಹಿತಿ ನಿರ್ದೇಶಕರಾದ ನೀಲ್‌ಕಮಲ್ ಸಿಂಗ್, '1960ರ ಭಾರತೀಯ ಜಿನೀವಾ ಸಮ್ಮೇಳನ ಕಾಯಿದೆ ಪ್ರಕಾರ ರೆಡ್‌ಕ್ರಾಸ್ ಚಿಹ್ನೆಯನ್ನು ಸಂಸ್ಥೆಯ ಸದಸ್ಯರಲ್ಲದವರು ಬಳಸಿದರೆ ರೂ. 500 ದಂಡ ವಸೂಲಿ ಮಾಡಬಹುದು. ದಂಡದ ಮೊತ್ತವನ್ನು ರೂ.3,500ಗೆ ಏರಿಸುವ ಪ್ರಸ್ತಾಪವಿದ್ದು, ಅದಕ್ಕೆ ಅಂತರ್‌ರಾಷ್ಟ್ರೀಯ ರೆಡ್‌ಕ್ರಾಸ್ ಸಂಸ್ಥೆ ಒಪ್ಪಿಗೆ ಸೂಚಿಸಿದೆ. ಉಗ್ರಗಾಮಿಗಳು ಕೂಡಾ ರೆಡ್‌ಕ್ರಾಸ್ ಚಿಹ್ನೆಯನ್ನು ದುರ್ಬಳಕೆ ಮಾಡಲು ಆರಂಭಿಸಿದ ಮೇಲೆ ಸರ್ಕಾರವೂ ಈ ಕಾಯಿದೆಗೆ ತಿದ್ದುಪಡಿ ತರುವ ಕುರಿತು ಯೋಚಿಸುತ್ತಿದೆ' ಎಂದರು. ಕಾಯಿದೆಯ ಮೊರೆ ಹೋಗದೆಯೇ ಜಮ್ಮು ಮತ್ತು ಕಾಶ್ಮೀರ, ನಾಗಾಲ್ಯಾಂಡ್, ಅಸ್ಸಾಂ ರಾಜ್ಯಗಳಲ್ಲಿ ಈ ಕುರಿತು ವ್ಯಾಪಕ ಜಾಗೃತಿ ಮೂಡಿಸಿರುವುದನ್ನು ಅವರು ಈ ಸಂದರ್ಭದಲ್ಲಿ ನೆನಪಿಸಿದರು.




ರೆಡ್‌ಕ್ರಾಸ್ ಚಿಹ್ನೆ ಕುರಿತು ಬೆಂಗಳೂರಿನಲ್ಲಿ ಸೋಮವಾರ ಏರ್ಪಡಿಸಲಾಗಿದ್ದ ವಿಚಾರ ಸಂಕಿರಣದಲ್ಲಿ ಭಾರತೀಯ ರೆಡ್‌ಕ್ರಾಸ್ ಸೊಸೈಟಿಯ ಪ್ರಧಾನ ಕಾರ್ಯದರ್ಶಿ ಡಾ| ಎಸ್.ಜಿ. ನಾರಾಯಣ, ಅಂತರ್‌ರಾಷ್ಟ್ರೀಯ ರೆಡ್‌ಕ್ರಾಸ್ ಸಮಿತಿಯ ಪ್ರಾದೇಶಿಕ ಸಹಕಾರ ಪ್ರತಿನಿಧಿ ಓಫ್ಲೋರ್ಬುರ್ಲ್ಕೆನ್ ವುಬೊಡೊ ಭಾರತೀಯ ರೆಡ್‌ಕ್ರಾಸ್‌ನ ಉಪ ಕಾರ್ಯದರ್ಶಿ ಡಾ| ಕಾಂತಿಮತಿ ಭಾಗವಹಿಸಿದ್ದರು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ಶಾಖೆ ಆಯೋಜಿಸಿದ್ದ ರೆಡ್‌ಕ್ರಾಸ್ ಚಿಹ್ನೆಯ ಬಳಕೆ ಕುರಿತ ವಿಚಾರ ಸಂಕಿರಣವನ್ನು ಉದ್ಘಾಟಿಸಿದ ಸಂಸ್ಥೆಯ ದೆಹಲಿ ಮುಖ್ಯಾಲಯದ ಉಪ ಕಾರ್ಯದರ್ಶಿ ಡಾ. ಗಾಂಧಿಮತಿ, 'ಸಂಸ್ಥೆಯ ಸದಸ್ಯರು ರೆಡ್‌ಕ್ರಾಸ್ ಚಿಹ್ನೆಯ ದುರ್ಬಳಕೆಯ ಕುರಿತು ಅರಿವು ಮೂಡಿಸಲು ಪ್ರಯತ್ನಿಸಬೇಕು' ಎಂದು ಕರೆ ನೀಡಿದರು.

ತಪ್ಪು ಅಭಿಪ್ರಾಯ: 'ರೆಡ್‌ಕ್ರಾಸ್ ಚಿಹ್ನೆ ಇಂದು ವೈದ್ಯಕೀಯ ಹಾಗೂ ಔಷಧಿ ಉದ್ಯಮಗಳಲ್ಲಿ ವ್ಯಾಪಕವಾಗಿ ಬಳಕೆ ಆಗುತ್ತಿದೆ. ಇದರಿಂದ ಹಿಂಸಾತ್ಮಕ ಸನ್ನಿವೇಶಗಳಲ್ಲಿ ಸಂಸ್ಥೆಯ ಸ್ವಯಂ ಸೇವಕರು ಕರ್ತವ್ಯ ನಿರ್ವಹಿಸುವಾಗ ಪೊಲೀಸರಿಂದ ವಿಚಾರಣೆ ಎದುರಿಸುವಂತಾಗಿದೆ. ಅಲ್ಲದೆ ಇದೊಂದು ಕ್ರಿಶ್ಚಿಯನ್ ಸಂಘಟನೆಯ ಚಿಹ್ನೆ ಎಂಬ ತಪ್ಪು ಅಭಿಪ್ರಾಯವೂ ಇದೆ' ಎಂದು ಅಭಿಪ್ರಾಯ ಪಟ್ಟರು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ಶಾಖೆಯ ಮುಖ್ಯ ಕಾರ್ಯದರ್ಶಿ ಡಾ. ಎಸ್.ಜಿ. ನಾರಾಯಣ, ಕೋಶಾಧಿಕಾರಿ, ಡಬ್ಲ್ಯೂ.ಪಿ. ಕೃಷ್ಣ, ಉಪಾಧ್ಯಕ್ಷ ಡಾ. ಡಿ. ಎಂ. ನಂಜುಂಡಪ್ಪ ಮತ್ತು ಮಾಹಿತಿ ಅಧಿಕಾರಿ ಪಿ. ಕೃಷ್ಣಮೂರ್ತಿ ಅವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ಶಾಖೆ 'ರೆಡ್‌ಕ್ರಾಸ್ ಚಿಹ್ನೆ'ಯ ದುರ್ಬಳಕೆ ತಡೆಗಟ್ಟುವ ಕುರಿತು ಐದು ದಿವಸಗಳ ಕಾಲ ಪ್ರಚಾರ ನಡೆಸಲಿದೆ.

ಬೆಂಗಳೂರು ವಿಜಯ
ಸೋಮವಾರ 28 ಜೂನ್ 2004

## ಸಂಕ್ಷಿಪ್ತ ಸುದ್ದಿಗಳು



ರೆಡ್‌ಕ್ರಾಸ್ ರಾಜ್ಯ ಗೌರವ ಖಜಾಂಚಿಯಾಗಿ ಆಯ್ಕೆಯಾದ ಡಬ್ಲ್ಯು.ಪಿ.ಕೃಷ್ಣ ಅವರಿಗೆ ರಾಜ್ಯಪಾಲ ಟಿ.ಎನ್.ಚತುರ್ವೇದಿ ಪ್ರಮಾಣಪತ್ರ ವಿತರಿಸಿದರು.

ಕರುನಾಡ ಸಂಜೆ

28-6-2004

# 'ರೆಡ್‌ಕ್ರಾಸ್ ಲಾಂಛನದ ದುರ್ಬಳಕೆ ಬಗ್ಗೆ ಜಾಗೃತಿ ಅಗತ್ಯ'

ಬೆಂಗಳೂರು, ಜೂ. 28: ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಲಾಂಛನವನ್ನು ವೈದ್ಯರು ಮತ್ತು ಔಷಧಿ ವ್ಯಾಪಾರಿಗಳು ದುರ್ಬಳಕೆ ಮಾಡುತ್ತಿರುವುದನ್ನು ತಡೆಗಟ್ಟಲು ರೆಡ್‌ಕ್ರಾಸ್ ಸಂಸ್ಥೆಯ ಕಾರ್ಯಕರ್ತರು ಜಾಗೃತಿ ಮೂಡಿಸಬೇಕಾಗಿದೆ ಎಂದು ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಸಹ ಕಾರ್ಯದರ್ಶಿ ಡಾ. ಗಣಪತಿ ತಿಳಿಸಿದ್ದಾರೆ.

ಇಂದು ನಗರದಲ್ಲಿ ಏರ್ಪಡಿಸಲಾಗಿದ್ದ ರೆಡ್‌ಕ್ರಾಸ್ ಸಂಸ್ಥೆ ಲಾಂಛನ ಕುರಿತ ವಿಚಾರ ಸಂಕಿರಣವನ್ನು ಉದ್ಘಾಟಿಸಿ ಅವರು ಮಾತನಾಡುತ್ತಿದ್ದರು.

ಮಾನವೀಯ ಮೌಲ್ಯಗಳುಳ್ಳ ರೆಡ್‌ಕ್ರಾಸ್ ಸಂಸ್ಥೆಯ ಲಾಂಛನ ಅತ್ಯಂತ ವಿಶಿಷ್ಟವಾದುದು ಮತ್ತು ಗೌರವಪೂರ್ವಕವಾದುದು. ಇದನ್ನು ವೈದ್ಯರು, ಔಷಧಿ ವ್ಯಾಪಾರಿಗಳು ಬಳಸಿಕೊಂಡು ರೆಡ್‌ಕ್ರಾಸ್ ಸಂಸ್ಥೆಯ ಕಾನೂನನ್ನು ಉಲ್ಲಂಘಿಸುತ್ತಿದ್ದಾರೆಂದು ಅವರು ವಿಷಾದ ವ್ಯಕ್ತಪಡಿಸಿದರು.

ಜಿನೇವಾ ಒಪ್ಪಂದ 1960ರ ಪ್ರಕಾರ ರೆಡ್‌ಕ್ರಾಸ್ ಸಂಸ್ಥೆಯ ಲಾಂಛನವನ್ನು ಬೇರೆ ಯಾರಾದರು ಬಳಸಿದ್ದಲ್ಲಿ 500 ರೂ.ಗಳ ದಂಡ ವಿಧಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿ ಲಾಂಛನವನ್ನು ಬಳಸುತ್ತಿರುವವರಲ್ಲಿ ಜಾಗೃತಿ ಮೂಡಿಸಬೇಕಾದ ಕರ್ತವ್ಯ ಸಂಸ್ಥೆಯ ಸ್ವಯಂ ಸೇವಕರ ಮೇಲಿದೆ ಎಂದರು.

ವಿಚಾರ ಸಂಕಿರಣದಲ್ಲಿ ಭಾರತೀಯ ರೆಡ್‌ಕ್ರಾಸ್‌ನ ಕರ್ನಾಟಕ ಶಾಖೆಯ ಖಜಾಂಚಿ ಡಬ್ಲ್ಯು.ಪಿ. ಕೃಷ್ಣ, ಅಂತರಾಷ್ಟ್ರೀಯ ರೆಡ್‌ಕ್ರಾಸ್ ಸಂಸ್ಥೆಯ ಪ್ರತಿನಿಧಿ ಒಸರ್‌ಬೆಲ್ ಒಬೆಡೋ, ನೀಲಕಮಲ ಸಿಂಗ್, ಡಾ. ಎಸ್.ಪಿ. ನಾರಾಯಣ ಭಾಗವಹಿಸಿದ್ದರು.

25-6-2004

ರಾಜ್ಯಪ್ರಗತಿ

### ಭಾರತೀಯ ರೆಡ್‌ಕ್ರಾಸ್ ಸಂಸ್ಥೆ

# ಕೆ.ಎಂ.ನಂಜಪ್ಪ ತಂಡದ ಜಯಭೇರಿ



ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯ ಆಡಳಿತ ಮಂಡಳಿಗೆ ಇತ್ತೀಚೆಗೆ ನಡೆದ ಚುನಾವಣೆಯಲ್ಲಿ ಕೆ.ಎಂ.ನಂಜಪ್ಪ ತಂಡದಿಂದ ಸ್ಪರ್ಧಿಸಿದ್ದ ಎಲ್ಲ ಆರೂ ಮಂದಿ ಹೆಚ್ಚು ಮತಗಳನ್ನು ಪಡೆದು ಆಯ್ಕೆಯಾಗಿದ್ದಾರೆ. ಮಂಡಳಿಯ ಆರೂ ಸ್ಥಾನಗಳನ್ನು ತಮ್ಮದಾಗಿರಿಸಿಕೊಂಡಿರುವ ಈ ತಂಡಕ್ಕೆ ಹಾರ್ದಿಕ ಶುಭಾಶಯಗಳು.

ಆಯ್ಕೆಯಾದವರು: ಡಬ್ಲ್ಯು.ಪಿ.ಕೃಷ್ಣ, ಸಿ.ಪಿ.ಸರೋಜ, ಮಧುರಾ ಅಶೋಕಕುಮಾರ್, ಡಾ|| ಎಚ್.ಕೆ.ನಾಗರಾಜ್, ಆರ್.ಕೃಷ್ಣ ಮತ್ತು ಎಂ.ನಾಗರಾಜ್

B ಪ್ರಜಾವಾಣಿ, ಗುರುವಾರ 24ನೇ ಜೂನ್ 2004 ಪುಟ 3

# ವಿದ್ಯಾರ್ಥಿಗಳು ಮುನ್ನಡೆ ಸಾಧಿಸಲು ಸಲಹೆ

ಯಲಹಂಕ, ಜೂ. 23– ವಿದ್ಯಾರ್ಥಿಗಳು ಜೀವನದಲ್ಲಿ ಮುನ್ನಡೆ ಸಾಧಿಸಬೇಕು ಎಂದು ಬಂಜಾರ ಆಕಾಡೆಮಿಯ ಅಧ್ಯಕ್ಷರಾದ ಅಲಿಖ್ವಾಜಾ ಹೇಳಿದರು.

ಅವರು ಯಲಹಂಕ ಉಪನಗರದ ಶೇಷಾದ್ರಿಪುರಂ ಕಾಂಪೊಸಿಟ್ ಕಾಲೇಜಿನಲ್ಲಿ ಏರ್ಪಡಿಸಿದ್ದ ನೂತನ ವಿದ್ಯಾರ್ಥಿಗಳಿಗೆ ಸ್ವಾಗತ ಕೋರುವ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಮಾತನಾಡಿದರು. ಅಂತರಾಷ್ಟ್ರೀಯ ಸೃಜನಾತ್ಮಕ ಶಿಕ್ಷಣ ಅಕಾಡೆಮಿಯ ಅಧ್ಯಕ್ಷರಾದ ಡಾ. ಗುರುರಾಜ್ ವಿ. ಕರಜಗಿ ಮಾತನಾಡಿದರು. ಶೇಷಾದ್ರಿಪುರಂ ಎಜುಕೇಷನಲ್ ಟ್ರಸ್ಟ್‌ನ ಅಧ್ಯಕ್ಷರಾದ ಕೆ.ಎಂ. ನಂಜಪ್ಪ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಇದೇ ಸಂದರ್ಭದಲ್ಲಿ ಪೋಷಕರಲ್ಲೊಬ್ಬರಾದ ನಾಗರಾಜ್, ಶಿಕ್ಷಕರು ವಿದ್ಯಾರ್ಥಿಗಳ ಬಗ್ಗೆ ಯಾವ ರೀತಿ ಜಾಗೃತಿ ವಹಿಸಬೇಕೆಂದು ಹೇಳಿದರು. ಕನ್ನಡ ಉಪನ್ಯಾಸಕಿ ವಿಜಯಾ ಪರಿಚಯಿಸಿದರು. ಸಮಾರಂಭದಲ್ಲಿ ಶೇಷಾದ್ರಿಪುರಂ ಎಜುಕೇಷನಲ್ ಟ್ರಸ್ಟ್‌ನ ಕಾರ್ಯದರ್ಶಿ ಡುಬ್ಲ್ಯು.ಪಿ. ಕೃಷ್ಣ, ಆರ್. ಕೃಷ್ಣ, ಪದವಿಪೂರ್ವ ಕಾಲೇಜಿನ ಪ್ರಾಂಶುಪಾಲರಾದ ಡಾ. ಆರ್. ರಮೇಶ್, ಆಡಳಿತ ಮಂಡಳಿ ಅಧ್ಯಕ್ಷರಾದ ಎಸ್. ವೀರಭದ್ರಯ್ಯ, ಟ್ರಸ್ಟಿಗಳಾದ ಶ್ರೀನಿವಾಸನ್, ಡುಬ್ಲ್ಯು.ಜಿ. ರಾಮಕೃಷ್ಣ, ಸರೋಜ- ನಂಜಪ್ಪ, ಗೋಪಾಲ್‌ಭಾಗವಹಿಸಿದ್ದರು. ಪ್ರಾಂಶುಪಾಲರಾದ ಡಾ. ಎಂ. ಪ್ರಕಾಶ್ ಸ್ವಾಗತಿಸಿದರು.

ಇತಿಹಾಸದ ಉಪನ್ಯಾಸಕರಾದ ಕುಶಾಲಪ್ಪ ವಂದಿಸಿದರು. ಆಂಗ್ಲ ಉಪನ್ಯಾಸಕಿ ಸಬೀಹ ಫಾತಿಮಾ ಕಾರ್ಯಕ್ರಮ ನಿರೂಪಿಸಿದರು.

B ಪ್ರಜಾವಾಣಿ, ಗುರುವಾರ 24ನೇ ಜೂನ್ 2004 ಪುಟ 3

# ರೆಡ್‌ಕ್ರಾಸ್ ಸಂಸ್ಥೆ ಪದಾಧಿಕಾರಿಗಳು

ಬೆಂಗಳೂರು, ಜೂನ್ 23– ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ರಾಜ್ಯ ಶಾಖೆಯ ಆಡಳಿತ ಮಂಡಳಿಗೆ ಡಬ್ಲ್ಯೂ.ಪಿ. ಕೃಷ್ಣ, ಸಿ.ಪಿ. ಸರೋಜ, ಮಧುರಾ ಅಶೋಕ್ ಕುಮಾರ್, ಡಾ. ಎಚ್.ಕೆ. ನಾಗರಾಜ್, ಆರ್. ಕೃಷ್ಣ ಮತ್ತು ಎಂ. ನಾಗರಾಜ್ ಆಯ್ಕೆಯಾಗಿದ್ದಾರೆ'.

'ಆಯ್ಕೆಯಾದವರಿಗೆ ಸಂಸ್ಥೆಯ ಅಧ್ಯಕ್ಷರಾದ, ರಾಜ್ಯಪಾಲ ಟಿ.ಎನ್. ಚತುರ್ವೇದಿ ಚುನಾವಣಾ ಪ್ರಮಾಣ ಪತ್ರ ವಿತರಿಸಿದರು ಎಂದು ಚುನಾವಣಾಧಿಕಾರಿ ಕೆ. ನಾಗರಾಜು ಇಂದು ಪತ್ರಿಕಾಗೋಷ್ಠಿಯಲ್ಲಿ ತಿಳಿಸಿದರು.

ಈ ಆರು ಮಂದಿಯ ಪೈಕಿ ಒಬ್ಬರನ್ನು ಆಡಳಿತ ಮಂಡಳಿಯ ಉಪ ಮುಖ್ಯಸ್ಥರನ್ನಾಗಿ ಆಯ್ಕೆ ಮಾಡಲಾಗುತ್ತದೆ. ಸಂಸ್ಥೆಗೆ ರಾಜ್ಯಪಾಲರು ಅಧ್ಯಕ್ಷರು, ಮುಖ್ಯಮಂತ್ರಿಗಳು ಉಪಾಧ್ಯಕ್ಷರು, ಹಾಗೂ ಆರೋಗ್ಯ ಸಚಿವರು ಆಡಳಿತ ಮಂಡಳಿಯ ಮುಖ್ಯಸ್ಥರು ಆಗಿರುತ್ತಾರೆ.

# ರೆಡ್‌ಕ್ರಾಸ್ ಸದಸ್ಯರ ಆಯ್ಕೆ

ಬೆಂಗಳೂರು, ಜೂ.22-ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಘಟಕದ ಆಡಳಿತ ಮಂಡಳಿಯ ಆರು ಸದಸ್ಯರ ಸ್ಥಾನಕ್ಕೆ ನಡೆದ ಚುನಾವಣೆಯ ಫಲಿತಾಂಶ ಪ್ರಕಟವಾಗಿದೆ.

ಜೂ. 20ರಂದು ನಡೆದ ಚುನಾವಣೆಯಲ್ಲಿ ಆರು ಸ್ಥಾನಕ್ಕೆ 22 ಅಭ್ಯರ್ಥಿಗಳು ಸ್ಪರ್ಧಿಸಿದ್ದರು ಎಂದು ಚುನಾವಣಾಧಿಕಾರಿ ಹಾಗೂ ಉಪ ಆಯುಕ್ತ ಕೆ. ನಾಗರಾಜು ಪತ್ರಿಕಾಗೋಷ್ಠಿಯಲ್ಲಿ ಮಂಗಳವಾರ ತಿಳಿಸಿದರು.

ಡಬ್ಲ್ಯು. ಪಿ. ಕೃಷ್ಣ -317, ಸಿ. ಪಿ. ಸರೋಜಾ-292, ಮಧುರಾ ಅಶೋಕ್ ಕುಮಾರ್-292, ಡಾ. ಎಚ್. ಕೆ. ನಾಗರಾಜ್-288, ಎಎಆರ್ ಕೃಷ್ಣ -286 ಹಾಗೂ ಎಂ. ನಾಗರಾಜ್-248 ಮತಗಳನ್ನು ಪಡೆದು ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ಇವರ ಅಧಿಕಾರಾವಧಿ ಎರಡು ವರ್ಷಗಳು.

ಘಟಕದಲ್ಲಿ 7,548 ಮಂದಿ ಸದಸ್ಯರಾಗಿದ್ದು, ಆ ಪೈಕಿ 2, 036 ಮಂದಿ ಗುರುತಿನ ಚೀಟಿ ಪಡೆದು ಚುನಾವಣೆಯಲ್ಲಿ ಮತದಾನ ಹಕ್ಕನ್ನು ಪಡೆದಿದ್ದರು. 543 ಮಂದಿ ಮಾತ್ರ ಮತ ಚಲಾಯಿಸಿದ್ದು, ಒಟ್ಟು 22 ಅಭ್ಯರ್ಥಿಗಳಿಗೆ 2, 992 ಮತಗಳು ಚಲಾವಣೆಯಾಗಿವೆ. ಪ್ರತಿ ಮತದಾರನಿಗೂ 6 ಮತಗಳ ಅವಕಾಶವಿರುತ್ತದೆ ಎಂದರು.

ಸಂಸ್ಥೆಗೆ ಸದಸ್ಯರಾಗಲು ಜೂ. 20 ರವರೆಗೆ ಚುನಾವಣೆ ಪ್ರಯುಕ್ತ ನಿರ್ಬಂಧ ವಿಧಿಸಲಾಗಿತ್ತು. ಈಗ ಅದನ್ನು ತೆರವುಗೊಳಿಸಲಾಗಿದೆ.

ಪುಟ ೪ ಈ ಸಂಜೆ ಬುಧವಾರ ೨೩-೬-೨೦೦೪

# ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯ ಪದಾಧಿಕಾರಿಗಳ ಆಯ್ಕೆ

ಬೆಂಗಳೂರು, ಜೂ.೨೩- ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ಶಾಖೆಯ್ಯ ಆರು ಆಡಳಿತ ಮಂಡಳಿ ಸದಸ್ಯರಿಗೆ ನಡೆದ ಚುನಾವಣೆಯಲ್ಲಿ ಈ ಕೆಳಕಂಡವರು ಆಯ್ಕೆಯಾಗಿದ್ದಾರೆ.

ಡಬ್ಲ್ಯೂ.ಪಿ.ಕೃಷ್ಣ, ಸಿ.ಪಿ.ಸರೋಜ, ಮಧುರ ಅಶೋಕ ಕುಮಾರ್, ಎಚ್.ಕೆ.ನಾಗರಾಜ್, ಆರ್.ಕೃಷ್ಣ ಹಾಗೂ ಎಂ.ನಾಗರಾಜ್ ಆಯ್ಕೆಯಾಗಿದ್ದಾರೆ.

ಸಹಾಯಕ ಚುನಾವಣಾಧಿಕಾರಿ ಹಾಗೂ ಸಹಾಯಕ ಆಯುಕ್ತರೂ ಆದ ಕೆ.ನಾಗರಾಜ್ ಪತ್ರಿಕಾಗೋಷ್ಠಿಯಲ್ಲಿ ಈ ವಿಷಯ ತಿಳಿಸಿದರು.

ಜೂನ್ ೨೦ ರಂದು ಗುರುನಾನಕ್ ಭವನದಲ್ಲಿ ಮಾನ್ಯ ರಾಜ್ಯಪಾಲರ ಅಧ್ಯಕ್ಷತೆಯಲ್ಲಿ ನಡೆದ ಸರ್ವ ಸದಸ್ಯರ ಸಭೆಯ ನಂತರ ನಡೆದ ಚುನಾವಣೆಯಲ್ಲಿ ಒಟ್ಟು ೨೨ ಜನ ಸ್ಪರ್ಧೆಯಲ್ಲಿದ್ದು ಅತಿ ಹೆಚ್ಚಿನ ಮತ ಪಡೆದ ಈ ಆರು ಜನರನ್ನು ಆಡಳಿತ ಮಂಡಳಿ ಸದಸ್ಯರನ್ನಾಗಿ ಆಯ್ಕೆ ಮಾಡಿರುವುದಾಗಿ ಅವರು ತಿಳಿಸಿದ್ದಾರೆ.

ರೆಡ್‌ಕ್ರಾಸ್ ಸಂಸ್ಥೆ ಒಟ್ಟಾರೆ ೭೮೪೫ ಸದಸ್ಯರನ್ನು ಹೊಂದಿದ್ದು, ಆ ಪೈಕಿ ೨೦೩೬ ಸದಸ್ಯರು ಮಾತ್ರ ಗುರುತಿನ ಚೀಟಿ ಪಡೆದು ಮತದಾನ ಮಾಡುವ ಅರ್ಹತೆ ಪಡೆದಿದ್ದರು.

ಆ ಪೈಕಿ ೫೪೩ ಸದಸ್ಯರು ಮಾತ್ರ ಮತದಾನದಲ್ಲಿ ಪಾಲ್ಗೊಂಡಿದ್ದರು. ಪ್ರತಿ ಮತದಾರರಿಗೆ ಆರು ಮತ ಚಲಾಯಿಸುವ ಹಕ್ಕಿತ್ತಾದರೂ ಚಲಾವಣೆ ಆದ ಒಟ್ಟು ಮತಗಳು ೨೯೯೨ ಎಂದು ಅವರು ತಿಳಿಸಿದರು.

ಆಡಳಿತ ಮಂಡಳಿ ಸದಸ್ಯರ ಅವಧಿ ಎರಡು ವರ್ಷವಾಗಿರುತ್ತದೆ ಎಂದು ತಿಳಿಸಿದ ಅವರು, ಆರು ಜನರಲ್ಲಿ ಒಬ್ಬ ಅಧ್ಯಕ್ಷರು, ಉಪಾಧ್ಯಕ್ಷರನ್ನು ಅವರೇ ಆಯ್ಕೆ ಮಾಡಿಕೊಳ್ಳಲಿದ್ದಾರೆಂದು ಅವರು ತಿಳಿಸಿದರು.

# ರಾಜ್ಯ ರೆಡ್‌ಕ್ರಾಸ್ ಸಂಸ್ಥೆಗೆ ಆಯ್ಕೆ

(ನಮ್ಮ ಪ್ರತಿನಿಧಿಯಿಂದ)

ಬೆಂಗಳೂರು, ಜೂ. ೨೨- ಭಾರತ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯ ಆಡಳಿತ ಮಂಡಳಿಯ 6 ಸದಸ್ಯ ಸ್ಥಾನಗಳಿಗೆ ನಡೆದ ಚುನಾವಣೆಯಲ್ಲಿ ಡಬ್ಲ್ಯು.ಪಿ. ಕೃಷ್ಣ, ಸಿ.ಪಿ. ಸರೋಜಾ, ಮಧುರಾ ಅಶೋಕ್ ಕುಮಾರ್, ಡಾ. ಹೆಚ್.ಕೆ. ನಾಗರಾಜು, ಆರ್. ಕೃಷ್ಣ ಹಾಗೂ ಎಂ. ನಾಗರಾಜ್ ಅವರು ಬಹುಮತ ಪಡೆದು ಆಯ್ಕೆಯಾಗಿದ್ದಾರೆ.

ಶಾಖೆಯ ಚುನಾವಣಾಧಿಕಾರಿ ಹಾಗೂ ಸಹಾಯಕ ಆಯುಕ್ತ ಕೆ. ನಾಗರಾಜು ಪತ್ರಿಕಾಗೋಷ್ಠಿಯಲ್ಲಿಂದು ಸದಸ್ಯರ ಆಯ್ಕೆ ಪ್ರಕಟಿಸಿದರು.

ಆಡಳಿತ ಮಂಡಳಿಯ ಸದಸ್ಯರ ಸ್ಥಾನಕ್ಕೆ ಜೂ. 20ರಂದು ಚುನಾವಣೆ ನಡೆದಿತ್ತು. ಮತ ಚಲಾಯಿಸಲು ಅರ್ಹತೆ ಪಡೆದಿದ್ದ 2036 ಸದಸ್ಯರ ಪೈಕಿ 543 ಮಂದಿ ಮತ ಚಲಾಯಿಸಿದ್ದರು.

ಓರ್ವ ಸದಸ್ಯ 6 ಮತದಾನ ಮಾಡುವ ಹಕ್ಕು ಪಡೆದಿದ್ದು, 543 ಮಂದಿ 2992 ಮತ ಚಲಾಯಿಸಿದ್ದರು ಎಂದು ಅವರು ವಿವರಿಸಿದರು.

ಚುನಾವಣಾ ಕಣದಲ್ಲಿ 22 ಮಂದಿ ಅಭ್ಯರ್ಥಿಗಳಿದ್ದು, ಮತದಾನಕ್ಕೆ ಬಹುಪಯೋಗಿ ವಿದ್ಯುನ್ಮಾನ ಮತಯಂತ್ರ ಬಳಸಲಾಗಿತ್ತು ಎಂದು ತಿಳಿಸಿದರು.

ಆಯ್ಕೆಗೊಂಡಿರುವ ಸದಸ್ಯರಿಗೆ ರಾಜ್ಯಪಾಲ ಟಿ.ಎನ್. ಚತುರ್ವೇದಿ ಅವರು ಚುನಾವಣಾ ಪ್ರಮಾಣಪತ್ರ ವಿತರಿಸಿದ್ದಾರೆಂದು ಅವರು ತಿಳಿಸಿದರು.

ಸಂಸ್ಥೆಯ ಸದಸ್ಯರಾಗಬಯಸುವವರಿಗೆ ಇಂದಿನಿಂದ ಅರ್ಜಿಗಳನ್ನು ನಗರದ ತಿಮ್ಮಯ್ಯ ರಸ್ತೆಯ ಕರ್ನಾಟಕ ರಾಜ್ಯ ಹಣಕಾಸು ನಿಗಮದ ಕಟ್ಟಡದಲ್ಲಿರುವ ರೆಡ್‌ಕ್ರಾಸ್ ಸಂಸ್ಥೆ ಕಛೇರಿಯಲ್ಲಿ ನೀಡಲಾಗುವುದು ಎಂದು ತಿಳಿಸಿದರು.

# ರೆಡ್‌ಕ್ರಾಸ್ ರಾಜ್ಯಶಾಖೆ ಚುನಾವಣೆಗೆ 22 ಮಂದಿ ಸ್ಪರ್ಧೆ

ಬೆಂಗಳೂರು, ಜೂ.17 - ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆ ಆಡಳಿತ ಮಂಡಳಿಗೆ ಜೂ. 20 ರಂದು ನಡೆಯಲಿರುವ ಚುನಾವಣೆಯಲ್ಲಿ 6 ಸದಸ್ಯ ಸ್ಥಾನಗಳಿಗೆ 22 ಅಭ್ಯರ್ಥಿಗಳು ಅಂತಿಮವಾಗಿ ಕಣದಲ್ಲಿ ಉಳಿದಿದ್ದಾರೆ.

ಬೆಂಗಳೂರಿನ ಗುರುನಾನಕ್ ಭವನದಲ್ಲಿ ನಡೆಯುವ ಸರ್ವಸದಸ್ಯರ ಸಭೆಯಲ್ಲಿ ಮತದಾನ ನಡೆಯಲಿದೆ. ಚುನಾವಣೆಯಲ್ಲಿ ವಿದ್ಯುನ್ಮಾನ ಮತಯಂತ್ರ ಬಳಕೆ ಮಾಡಲಾಗುವುದು . ಸರ್ವಸದಸ್ಯರ ಸಭೆಯಲ್ಲಿ ಸಂಸ್ಥೆಯ ಅಧ್ಯಕ್ಷರಾದ ರಾಜ್ಯಪಾಲ ಟಿ. ಎನ್. ಚತುರ್ವೇದಿ ಹಾಗೂ ಉಪಾಧ್ಯಕ್ಷರಾದ ಮುಖ್ಯಮಂತ್ರಿ ಧರ್ಮಸಿಂಗ್ ಭಾಗವಹಿಸಲಿದ್ದಾರೆ ಎಂದು ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ರಾಜ್ಯ ಶಾಖೆ ಸಹಾಯಕ ಆಯುಕ್ತ ಹಾಗೂ ಚುನಾವಣಾಧಿಕಾರಿ ಕೆ. ನಾಗರಾಜು ಸುದ್ದಿಗೋಷ್ಠಿಯಲ್ಲಿ ಬುಧವಾರ ತಿಳಿಸಿದರು.

ಸಂಸ್ಥೆಯ ರಾಜ್ಯ ಶಾಖೆಯ 7525 ಸದಸ್ಯರ ಪೈಕಿ ಇಲ್ಲಿಯವರೆಗೆ ಕೇವಲ 2036 ಸದಸ್ಯರು ಮಾತ್ರ ಗುರುತಿನ ಚೀಟಿ ಪಡೆದಿದ್ದಾರೆ. ಇವರು ಮಾತ್ರ ಚುನಾವಣೆಯಲ್ಲಿ ಮತ ಚಲಾಯಿಸುವ ಹಕ್ಕು ಪಡೆದಿರುತ್ತಾರೆ ಎಂದು ತಿಳಿಸಿದರು.

ಎನ್. ಪಿ. ಅಮೃತೇಶ್, ಎಸ್. ಸಿ. ಭಂಡಾರಿ, ಬೆಲ್ಲದ ಚಂದ್ರಕಾಂತ ಗುರಪ್ಪ, ಡಾ. ಆರ್. ಹಾಲೇಶ್, ಆರ್. ಕೃಷ್ಣ, ಡಬ್ಲ್ಯೂ.ಪಿ. ಕೃಷ್ಣ, ಮಧುರ ಅಶೋಕ್ ಕುಮಾರ್, ಎ. ಎಸ್. ನಾಗಭೂಷಣರಾವ್, ಎಂ. ನಾಗರಾಜ್, ಡಾ. ಎಚ್. ಕೆ. ನಾಗರಾಜ್, ಪದ್ಮ ಶ್ರೀನಿವಾಸ್, ಜಿ. ವಿ. ಪುಟ್ಟೇಗೌಡ, ಜಿ. ರಾಜಶೇಖರ್, ಡಾ. ಎಂ. ರಾಮಕೃಷ್ಣ, ಎಚ್. ರಾಮಕೃಷ್ಣಪ್ಪ, ಟಿ. ಎನ್. ರವಿಕುಮಾರ್, ಎಚ್. ಎಸ್. ರೇಣುಕ ಪ್ರಸಾದ್, ಸಿ. ಪಿ. ಸರೋಜ, ಸೋಮೇಶ್ ಮು. ಚಿಕ್ಕಮಠ, ಎಂ. ಸಂತೋಷ್, ಎಸ್. ಆರ್. ವಿಶ್ವನಾಥ ಹಾಗೂ ವೀರಭದ್ರಯ್ಯ ಚುನಾವಣಾ ಕಣದಲ್ಲಿದ್ದಾರೆ ಎಂದರು.

ವಿಜಯ ಕರ್ನಾಟಕ
ಶುಕ್ರವಾರ 18 ಜೂನ್ 2004



ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ರಾಜ್ಯ ಶಾಖೆಯಲ್ಲಿ ಅತಿ ಹೆಚ್ಚು ರಕ್ತದಾನ ಶಿಬಿರಗಳನ್ನು ನಡೆಸಿರುವ ಹೆಗ್ಗಳಿಕೆಗೆ ಪಾತ್ರವಾದ ಮಂಡ್ಯ ಜಿಲ್ಲಾ ಶಾಖೆಯ ಪರವಾಗಿ ಉಪಾಧ್ಯಕ್ಷೆ ಮೀರಾ ಶಿವಲಿಂಗಯ್ಯ ರಾಜ್ಯಪಾಲ ಟಿ.ಎನ್.ಚತುರ್ವೇದಿ ಅವರಿಂದ ಪ್ರಶಸ್ತಿ ಸ್ವೀಕರಿಸಿದರು.

ಈ ಸಂಜೆ

ಶುಕ್ರವಾರ ೧೭-೬-೨೦೦೫




ವಿಶ್ವ ಸ್ವಯಂ ರಕ್ತದಾನಿಗಳ ದಿನಾಚರಣೆ ಪ್ರಯುಕ್ತ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ರಾಜ್ಯ ಶಾಖೆ ಹಮ್ಮಿಕೊಂಡಿದ್ದ ರಕ್ತದಾನ ಶಿಬಿರದಲ್ಲಿ ಸೆಂಟ್‌ಜಾನ್ಸ್ ಫಾರ್ಮಸಿ ಕಾಲೇಜಿನ ವಿದ್ಯಾರ್ಥಿಗಳು ರಕ್ತದಾನ ಮಾಡಿದರು. ಡಬ್ಲ್ಯು.ಪಿ.ಕೃಷ್ಣ, ಆರ್.ಕೃಷ್ಣ, ಮದುರಾ ಅಶೋಕ್‌ಕುಮಾರ್, ಸರೋಜನಂಜಪ್ಪ, ರಕ್ತನಿಧಿ ಸಂಸ್ಥೆ ಅಧ್ಯಕ್ಷ ರಾಜುಚಂದ್ರಶೇಖರ್, ಎನ್.ಜಿ.ನಾರಾಯಣ ಮತ್ತಿತರರು ಉಪಸ್ಥಿತರಿದ್ದರು.

# 'ವಿದ್ಯೆಯ ಜತೆ ವಿನಯವಂತ ಸಂಸ್ಕಾರ ಮುಖ್ಯ'

ಬೆಂಗಳೂರು,ಜೂ.6 -ವಿನಯವಿಲ್ಲದ ವಿದ್ಯೆ ಸಮಾಜವನ್ನು ನೈತಿಕ ಅಧಃಪತನಕ್ಕೆ ತಳ್ಳುತ್ತದೆ ಎಂದು ಆದಿಚುಂಚನಗಿರಿ ಮಠದ ಶ್ರೀಬಾಲಗಂಗಾಧರನಾಥ ಸ್ವಾಮೀಜಿ ಹೇಳಿದ್ದಾರೆ.

ಬೆಂಗಳೂರಿನಲ್ಲಿ ಭಾನುವಾರ ನಡೆದ ಕಾವೇರಿ ಸೋಷಿಯಲ್ ಅಂಡ್ ಎಜುಕೇಷನ್ ಟ್ರಸ್ಟ್ ಸಹಕಾರ ನಗರದಲ್ಲಿ ನೂತನವಾಗಿ ಆರಂಭಿಸುತ್ತಿರುವ 'ಕಾವೇರಿ - ಮಹಾವಿದ್ಯಾಲಯ'ದ ಪ್ರಾರಂಭೋತ್ಸವ ಸಮಾರಂಭದ ಸಾನಿಧ್ಯ ವಹಿಸಿ ಅವರು ಆಶೀರ್ವಚನ ನೀಡಿದರು.

ಮಹಾವಿದ್ಯಾಲಯಗಳಲ್ಲಿ ಪದವಿಯ ಮೇಲೆ ಪದವಿ ಗಳಿಸುವುದೊಂದೇ ವಿದ್ಯಾರ್ಥಿಗಳ ಗುರಿಯಾಗಬಾರದು. ಜತೆಗೆ ಅತಿ ಮುಖ್ಯವಾದ ಮಾನವೀಯ ಮೌಲ್ಯಗಳನ್ನು ರೂಡಿಸಿಕೊಳ್ಳಬೇಕು. ವಿನಯವಿದ್ದರೆ ಮಾತ್ರ ಕಲಿತ ವಿದ್ಯೆಗೆ ಶೋಭೆ ಬರುತ್ತದೆ ಎಂದರು.

ದೇಶದ ಸಂಸ್ಕೃತಿಯನ್ನು ಮರೆತ ಸರಕಾರಿ ಅಧಿಕಾರಿಗಳು ದರ್ಪ ಮೆರೆಯುತ್ತಿದ್ದಾರೆ. ವಿನಯ ವಿಲ್ಲದ ವಿದ್ಯೆ ಅವರನ್ನು ಹೀಗೆ ಮಾಡಿದೆ.ಮೊದಲು ತಂದೆ-ತಾಯಿಗಳನ್ನು ಗೌರವಿಸುವ ಗುಣವನ್ನು ಹೊಂದಬೇಕು.ಇದರಿಂದ ವ್ಯಕ್ತಿ ತಾನೇ ತಾನಾಗಿ ಉತ್ತಮ ಸಂಸ್ಕಾರ ಹೊಂದುತ್ತಾನೆ.ಇಂದು ವಿದ್ಯಾವಂತರು ಹೆತ್ತವರನ್ನು ವೃದ್ಧಾಶ್ರಮಕ್ಕೆ ಸೇರಿಸಿ ಕೈ ತೊಳೆದುಕೊಳ್ಳುವ ಹಂತಕ್ಕೆ ಬಂದಿದ್ದಾರೆ.ಇದು ಪುಣ್ಯಭೂಮಿ ಭಾರತದ ಸಂಸ್ಕೃತಿಯಲ್ಲ.ಹಿರಿಯರ ಅನುಗ್ರಹ ಪಡೆದು ಮುಂದಡಿಯಿಟ್ಟಾಗ ಯಶಸ್ಸು ಸಿದ್ಧಿಸುತ್ತದೆ ಎಂದು ಹೇಳಿದರು.



ಬೆಂಗಳೂರಿನಲ್ಲಿ ಭಾನುವಾರ 'ಕಾವೇರಿ ಮಹಾವಿದ್ಯಾಲಯದ' ಪ್ರಾರಂಭೋತ್ಸವದಲ್ಲಿ ಆದಿಚುಂಚನಗಿರಿ ಮಠದ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿ ಆಶೀರ್ವಚನ ನೀಡಿದರು. ಬ್ಯಾಟರಾಯನಪುರ ನಗರ ಸಭೆ ಅಧ್ಯಕ್ಷ ಶ್ರೀನಿವಾಸ ರಾಜು ಕೊಡಿಗೆಹಳ್ಳಿ, ಮಾಜಿ ಅಧ್ಯಕ್ಷ ಎನ್.ನಂಜುಂಡಪ್ಪ ಮುಂತಾದವರು ಹಾಜರಿದ್ದರು.

ಸಮಾರಂಭದ ಪೂರ್ವದಲ್ಲಿ ಸಿದ್ದಗಂಗಾ ಮಠದ ಶಿವಕುಮಾರ ಸ್ವಾಮೀಜಿಯವರು ಮಹಾವಿದ್ಯಾಲಯಕ್ಕೆ ಭೇಟಿ ನೀಡಿ ಶುಭ ಹಾರೈಸಿದರು. ಬ್ಯಾಟರಾಯನಪುರ ನಗರ ಸಭೆ ಅಧ್ಯಕ್ಷ ಶ್ರೀನಿವಾಸ ರಾಜು, ಶೇಷಾದ್ರಿಪುರ ಎಜುಕೇಷನ್ ಟ್ರಸ್ಟ್ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ, ಬ್ಯಾಟರಾಯನಪುರ ನಗರ ಸಭೆ ಮಾಜಿ ಅಧ್ಯಕ್ಷ ಹನುಮಂತೇಗೌಡ, ಕೊಡಿಗೆಹಳ್ಳಿ ಮಾಜಿ ಚೇರ್ಮನ್ ಎನ್. ನಂಜುಂಡಪ್ಪ, ಮ್ಯಾನೇಜಿಂಗ್ ಟ್ರಸ್ಟಿ ಎನ್. ಮಂಜುನಾಥ್,ಅಧ್ಯಕ್ಷ ಬಿ.ಎಮ್. ದೇವರಾಜಪ್ಪ ಹಾಗೂ ಮಹಾವಿದ್ಯಾಲಯದ ಸಿಬ್ಬಂದಿ ವರ್ಗ ಉಪಸ್ಥಿತರಿದ್ದರು.

ಪ್ರಜಾವಾಣಿ, ಶನಿವಾರ 5ನೇ ಜೂನ್ 2004 ಪುಟ 3

# 6 ರಂದು ಕಾವೇರಿ ಕಾಲೇಜು ಉದ್ಘಾಟನೆ

ಯಲಹಂಕ, ಜೂನ್ 4– ಬೆಂಗಳೂರಿಗೆ ಸಮೀಪವಿರುವ ಸಹಕಾರ ನಗರದಲ್ಲಿ ಜೂ 6 ರಂದು ಬೆಳಿಗ್ಗೆ 11 ಗಂಟೆಗೆ ಕಾವೇರಿ ಸೋಷಿಯಲ್ ಅಂಡ್ ಎಜುಕೇಷನ್ ಟ್ರಸ್ಟ್ ನಿರ್ಮಿಸಿರುವ ಕಾವೇರಿ ಮಹಾವಿದ್ಯಾಲಯದ ಕಟ್ಟಡದ ಪ್ರಾರಂಭೋತ್ಸವವನ್ನು ಸಿದ್ದಗಂಗಾ ಮಠಾಧೀಶ ಶ್ರೀ ಶಿವಕುಮಾರಸ್ವಾಮಿಗಳು ನೆರವೇರಿಸುವರು.

ಆದಿಚುಂಚನಗಿರಿ ಮಠಾಧೀಶ ಬಾಲಗಂಗಾಧರನಾಥ ಸ್ವಾಮೀಜಿ ಕಟ್ಟಡದ ಉದ್ಘಾಟನೆ ನೆರವೇರಿಸುವರು. ಎಲಹಂಕ ಶಾಸಕ ಬಿ. ಪ್ರಸನ್ನಕುಮಾರ್ , ಬ್ಯಾಟರಾಯನಪುರ ನಗರಸಭೆ ಅಧ್ಯಕ್ಷ ಶ್ರೀನಿವಾಸರಾಜು, ಶೇಷಾದ್ರಿಪುರಂ ಎಜುಕೇಷನ್ ಟ್ರಸ್ಟ್ ಕಾರ್ಯದರ್ಶಿ ಡಬ್ಲ್ಯು. ಪಿ. ಕೃಷ್ಣ ಹಾಗೂ ಹನುಮಂತೇಗೌಡ, ಮಿನಿಸ್ಟ್ರಿ ಆಫ್ ಕಮ್ಯುನಿಕೇಷನ್ಸ್ ಹೌಸಿಂಗ್ ಸೊಸೈಟಿ ಅಧ್ಯಕ್ಷ ಎಚ್.ಎನ್. ಮಹುಲಿ ಮತ್ತು ಎನ್. ನಂಜುಂಡಪ್ಪ, ಸುಶೀಲಾ ತಮ್ಮಣ್ಣ, ಎನ್. ಬಿ. ಚಂದ್ರಶೇಖರಯ್ಯ ಮುಖ್ಯ ಅತಿಥಿಗಳಾಗಿ ಆಗಮಿಸುವರು ಎಂದು ಟ್ರಸ್ಟ್ ಅಧ್ಯಕ್ಷ ಬಿ.ಎಂ. ದೇವರಾಜಪ್ಪ ಪ್ರಕಟಣೆಯಲ್ಲಿ ತಿಳಿಸಿದ್ದಾರೆ.

03.06.2004

# ಎಂಬಿಎ, ಎಂಸಿಎಗೆ ತಾತ್ಕಾಲಿಕ ಶುಲ್ಕ ನಿಗದಿ

ಬೆಂಗಳೂರು, ಜೂ.2 - ರಾಜ್ಯದಲ್ಲಿ ವೃತ್ತಿಪರ ಶಿಕ್ಷಣ ಕೋರ್ಸುಗಳಿಗೆ ಶುಲ್ಕ ನಿಗದಿ ಸಮಿತಿ 2004-05 ನೇ ಸಾಲಿಗೆ ಎಂಬಿಎ, ಎಂಸಿಎ ಹಾಗೂ ಎಂಟೆಕ್ ಕೋರ್ಸುಗಳ ಪ್ರವೇಶಕ್ಕೆ ತಾತ್ಕಾಲಿಕ ಶುಲ್ಕ ನಿಗದಿ ಮಾಡಿದೆ.

ನ್ಯಾಯಮೂರ್ತಿ ಎ. ಬಿ. ಮ[illegible]ಡ್ ಅಧ್ಯಕ್ಷತೆಯ ಸಮಿತಿ ಎಂಬಿಎ ಕೋರ್ಸ್‌ಗೆ 45 ಸಾವಿರ ರೂ., ಎಂಸಿಎ ಕೋರ್ಸ್‌ಗೆ 55 ಸಾವಿರ ರೂ. ಹಾಗೂ ಎಂಟೆಕ್ ಕೋರ್ಸ್‌ಗಳಿಗೆ 60 ಸಾವಿರ ರೂ. ಶುಲ್ಕ ನಿಗದಿ ಮಾಡಿದೆ. ಸರಕಾರಿ ಹಾಗೂ ಮ್ಯಾನೇಜ್‌ಮೆಂಟ್ ಕೋಟಾ ಸೀಟುಗಳಿಗೆ ಸಮಾನ ಶುಲ್ಕ ನಿಗದಿ ಪಡಿಸಲಾಗಿದೆ.

ನಿಗದಿತ ತಾತ್ಕಾಲಿಕ ಶುಲ್ಕ ಪಾವತಿಸುವ ವಿದ್ಯಾರ್ಥಿಗಳನ್ನು ಕೋರ್ಸುಗಳಿಗೆ ದಾಖಲು ಮಾಡಬೇಕು. ವಿದ್ಯಾರ್ಥಿಗಳಿಂದ ಹೆಚ್ಚಿನ ಹಣಕ್ಕಾಗಿ ಒತ್ತಾಯಿಸಬಾರದು ಎಂದು ಸಮಿತಿ ಕಾಲೇಜುಗಳಿಗೆ ಸೂಚಿಸಿದೆ.

ಖಾಸಗಿ ಕಾಲೇಜುಗಳು ಶುಲ್ಕ ನಿಗದಿಗೆ ಸಂಬಂಧಿಸಿದಂತೆ ಕಳುಹಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಅಂತಿಮ ಶುಲ್ಕ ನಿಗದಿ ಪಡಿಸಲಾಗುವುದು ಎಂದು ಕಾಲೇಜುಗಳಿಗೆ ಕಳುಹಿಸಿರುವ ಸುತ್ತೋಲೆಯಲ್ಲಿ ತಿಳಿಸಲಾಗಿದೆ.

**ಪರ್ಯಾಯ ಸಿಇಟಿ:** ಎಂಬಿಎ ಹಾಗೂ ಎಂಸಿಎ ಸ್ನಾತಕೋತ್ತರ ಪದವಿ ಕೋರ್ಸುಗಳ ಶೇ. 50 ರಷ್ಟು ಮ್ಯಾನೇಜ್‌ಮೆಂಟ್ ಸೀಟುಗಳ ಭರ್ತಿಗೆ ಪರ್ಯಾಯ ಸಿಇಟಿ ಜುಲೈ 4 ರಂದು ನಡೆಯಲಿದೆ.

ಈ ಕೋರ್ಸುಗಳ ಪ್ರವೇಶಕ್ಕೆ ಪರ್ಯಾಯ ಸಿಇಟಿಗೆ ಹಾಜರಾಗಲು ಬಯಸುವ ವಿದ್ಯಾರ್ಥಿಗಳಿಗೆ ಜೂ. 10 ರಿಂದ ಅರ್ಜಿಗಳನ್ನು ವಿತರಿಸಲಾಗುತ್ತದೆ. ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಜೂ. 30 ಕೊನೆಯ ದಿನ ಎಂದು ರಾಜ್ಯ ಖಾಸಗಿ ಸ್ನಾತಕೋತ್ತರ ಪದವಿ ಕಾಲೇಜುಗಳ ಸಂಘದ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ ತಿಳಿಸಿದ್ದಾರೆ.

ಎಂಬಿಎ ಹಾಗೂ ಎಂಸಿಎ ಸ್ನಾತಕೋತ್ತರ ಪದವಿ ಕೋರ್ಸುಗಳಿಗೆ 50 : 50 ಅನುಪಾತದಲ್ಲಿ ಸೀಟು ಹಂಚಿಕೆಯನ್ನು ಸರಕಾರ ಈಗಾಗಲೇ ಪ್ರಕಟಿಸಿದೆ. ಸರಕಾರಿ ಕೋಟಾದ ಶೇ. 50 ಸೀಟುಗಳ ಭರ್ತಿಗೆ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವ ವಿದ್ಯಾಲಯ (ವಿಟಿಯು) ಸಿಇಟಿ ನಡೆಸಲಿದೆ.

**ಸೂಚನೆ:** ಎಸ್ಸೆಸ್ಸೆಲ್ಸಿ ಪೂರಕ ಪರೀಕ್ಷೆ ಜೂ. 10 ರಿಂದ 17 ರವರೆಗೆ ನಡೆಯುತ್ತಿರುವ ಹಿನ್ನೆಲೆಯಲ್ಲಿ, ಬೆಂಗಳೂರು ಉತ್ತರ ಹಾಗೂ ಬೆಂಗಳೂರು ದಕ್ಷಿಣ ಜಿಲ್ಲೆಗಳ (ಆನೇಕಲ್ ತಾಲೂಕು ಹೊರತುಪಡಿಸಿ) ಪರೀಕ್ಷಾ ಕೇಂದ್ರಗಳ ಮುಖ್ಯ ಅಧೀಕ್ಷಕರು ಪೂರಕ ಪರಿಕರಗಳನ್ನು ಮಲ್ಲೇಶ್ವರದಲ್ಲಿರುವ ಮಂಡಳಿ ಕಚೇರಿಯಿಂದ ಪಡೆದುಕೊಳ್ಳಬಹುದು ಎಂದು ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷೆ ಮಂಡಳಿ ನಿರ್ದೇಶಕ ಟಿ. ಎಂ. ಕುಮಾರ್ ತಿಳಿಸಿದ್ದಾರೆ.

# ಶ್ರೀ ಡಬ್ಲ್ಯೂ.ಪಿ. ಕೃಷ್ಣರವರಿಗೆ ಅಭಿನಂದನೆಗಳು

– ಶ್ರೀ ಹೆಚ್.ಬಿ. ಶಿವಕುಮಾರ್, ಎಂ.ಎ., ಉಪನ್ಯಾಸಕರು, ಶ್ರೀ ಜಿ.ಬಿ. ಜನಾರ್ಧನ್, ಎಂ.ಎ.ಎಂ.ಫಿಲ್.



ಬೆಂಗಳೂರಿನ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಕಾರ್ಯದರ್ಶಿಗಳಾದ ಶ್ರೀ ಡಬ್ಲ್ಯೂ.ಪಿ. ಕೃಷ್ಣ ಅವರಿಗೆ 2004ರ ನವೆಂಬರ್ 5, 6 ಮತ್ತು 7 ರಂದು ಪುಣೆಯಲ್ಲಿ ನಡೆಯುವ ಅಖಿಲ ಭಾರತ ಬ್ರಹ್ಮಸಮಾಜದ ಸಮಾವೇಶದ 114ನೇ ವಾರ್ಷಿಕ ಅಧಿವೇಶನದ ಅಧ್ಯಕ್ಷತೆಯನ್ನು ವಹಿಸುವ ಗೌರವದ ಪಾತ್ರವು ದೊರತಿದೆ. ಬಾಂಗ್ಲ ದೇಶ ಮತ್ತು ಭಾರತ ದೇಶದಾದ್ಯಂತ ಹರಡಿರುವ 80ಕ್ಕೂ ಹೆಚ್ಚು ಬ್ರಹ್ಮಸಮಾಜ ಕೇಂದ್ರಗಳಿಂದ ಸುಮಾರು ಒಂದು ಸಾವಿರ ಪ್ರತಿನಿಧಿಗಳು ಈ ಸಮಾವೇಶದಲ್ಲಿ ಭಾಗವಹಿಸಿ, ಬ್ರಹ್ಮಸಮಾಜ ಚಳವಳಿಯ ಸಬಲೀಕರಣದ ಬಗ್ಗೆ ಚರ್ಚಿಸಲಿದ್ದಾರೆ. ಇದರ ಅಂಗವಾಗಿ ಹಮ್ಮಿಕೊಂಡ ಸರ್ವಧರ್ಮ ಸಭೆಯಲ್ಲಿ ಪ್ರಸಿದ್ಧ ವಿದ್ವಾಂಸರುಗಳು ಭಾಗವಹಿಸಲಿದ್ದಾರೆ.

ಶ್ರೀ ಡಬ್ಲ್ಯೂ.ಪಿ. ಕೃಷ್ಣರವರು ಈಗಾಗಲೇ 1992ರಲ್ಲಿ ನಡೆದ ಬ್ರಹ್ಮಸಮಾಜ ಸಮಾವೇಶದ ಯುವ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ್ದರು. ಇವರು ತಮ್ಮ ವಿದ್ಯಾರ್ಥಿ ದೆಸೆಯಿಂದಲೇ ಬೆಂಗಳೂರಿನ ಬ್ರಹ್ಮಸಮಾಜದ ಒಡನಾಡಿಗಳಾಗಿದ್ದಾರೆ, ಅಷ್ಟೇ ಅಲ್ಲದೇ ಬ್ರಹ್ಮಧರ್ಮ ಮತ್ತು ರಾಜಾ ರಾಮ್‌ಮೋಹನ ರಾಯ್ ಅವರ ಬಗ್ಗೆ ಬಹಳಷ್ಟು ಬರವಣಿಗೆ ಹಾಗೂ ಉಪನ್ಯಾಸಗಳನ್ನು ನೀಡಿದ್ದಾರೆ. ಅಲ್ಲದೆ ಇದುವರೆವಿಗೂ ನಡೆದಿರುವ ಅಖಿಲ ಭಾರತ ಬ್ರಹ್ಮಸಮಾಜದ ಸಮಾರಂಭಗಳ ಅಧ್ಯಕ್ಷತೆ ವಹಿಸಿದ್ದವರಲ್ಲಿ ಶ್ರೀ ಡಬ್ಲ್ಯೂ.ಪಿ. ಕೃಷ್ಣರವರು ಅತ್ಯಂತ ಕಿರಿಯ ವಯಸ್ಸಿನ ಅಧ್ಯಕ್ಷರು ಎಂಬುದನ್ನು ತಿಳಿಸಲು ಹರ್ಷಿಸುತ್ತೇವೆ. ಹಿಂದಿನ ಬ್ರಹ್ಮಸಮಾಜದ ಅಧಿವೇಶನಗಳ ಅಧ್ಯಕ್ಷತೆಯನ್ನು ಮಹಾನ್ ಮಹನೀಯರುಗಳು ವಹಿಸಿದ್ದಾರೆ. ಅವರುಗಳಲ್ಲಿ ಕೆಲವರೆಂದರೆ ಪಂಡಿತ್ ಶಿವನಾಥಶಾಸ್ತ್ರಿ (1916), ಪ್ರಖ್ಯಾತ ವಿಜ್ಞಾನಿ ಸರ್ ಪಿ.ಸಿ. ರಾಯ್ (1936), ನ್ಯಾಯಮೂರ್ತಿ ಎಸ್.ಆರ್. ದಾಸ್ (1958), ಡಾ|| ಕಾಳಿದಾಸ್‌ನಾಗ್ (1961), ಶ್ರೀಮತಿ ರೇಣುಕ ರೇ (1976) ಹಾಗೂ ಶ್ರೀ ಡಬ್ಲ್ಯೂ.ಹೆಚ್. ಹನುಮಂತಪ್ಪನವರು. (1982). ಶ್ರೀ ಡಬ್ಲ್ಯೂ.ಹೆಚ್. ಹನುಮಂತಪ್ಪನವರು ಹಜಾರಿಬಾಗ್‌ನಲ್ಲಿ ನಡೆದ 1982ರ ಮತ್ತು ಇಂದೋರಿನಲ್ಲಿ ನಡೆದ 1983ರ ಬ್ರಹ್ಮ ಸಮಾಜದ ಸಮಾವೇಶಗಳ ಅಧ್ಯಕ್ಷತೆ ವಹಿಸಿದ್ದರು. ಆ ಸಾಧಕರೆಲ್ಲರಿಗೂ ಹಾಗೂ ಶ್ರೀ ಡಬ್ಲ್ಯೂ.ಪಿ. ಕೃಷ್ಣರವರಿಗೂ ಕುಂಚಿಟಿಗ ಬಂಧು–ಬಾಂಧವರೆಲ್ಲರ ಶುಭಾಶಯಗಳು.

---

## ಅಖಿಲ ಕುಂಚಿಟಿಗರ ಮಹಾಮಂಡಲ ಟ್ರಸ್ಟ್

ಮೈಸೂರು ವಿದ್ಯಾರ್ಥಿನಿಲಯಕ್ಕಾಗಿ ಟ್ರಸ್ಟಿಗೆ ಕೊಡುಗೆ ನೀಡಿದ್ದವರು : ಶ್ರೀ ಮಾಲಿ ನಾಗರಾಜ್ (ದಿವಂಗತ ಶ್ರೀಮತಿ ಲಕ್ಷ್ಮಮ್ಮ–ದಿವಂಗತ ಮಾಲಿ ಮರಿಯಪ್ಪನವರ ಮಗ) ಮತ್ತು ಶ್ರೀಮತಿ ಕೋಮಲ ನಾಗರಾಜ್ (ಮೈಸೂರು ನಗರದ ಸ್ವಾತಂತ್ರ್ಯ ಹೋರಾಟಗಾರ ದಿವಂಗತ ಬಾಲಯ್ಯನವರ ಮೊಮ್ಮಗಳು) **ರೂ. 16,000**

## ಒಂದು ಸ್ಪಷ್ಟನೆ

ಏಪ್ರಿಲ್ 2004ರ ಸಂಚಿಕೆ ಪುಟ 5ರಲ್ಲಿ ಪ್ರಕಟಗೊಂಡಿರುವ ಬೆಂಗಳೂರಿನಲ್ಲಿ ಹೆಣ್ಣು ಮಕ್ಕಳ ಉಚಿತ ವಿದ್ಯಾರ್ಥಿನಿಲಯದ ಕೈಂಕರ್ಯ ಎಂಬ ಲೇಖನದ ಒಂದೆಡೆಯಲ್ಲಿ ಪ್ರೊ. ಮಾಲಿ ಮದ್ದಣ್ಣನವರು ವಿವಿಧ ಜನರಿಂದ ಸಂಗ್ರಹಿಸಿ ಮಹಾಮಂಡಲದ ಟ್ರಸ್ಟ್ ಮೂಲಕ ಮೈಸೂರು ಕುಂಚಿಟಿಗರ ವಿದ್ಯಾರ್ಥಿನಿಲಯಕ್ಕೆ ನೀಡಿದ ಕೊಡುಗೆಯನ್ನು **"ಸಾಲವೆಂದು ಪರಿಗಣಿಸಿ ಮಹಾಮಂಡಲದ ಟ್ರಸ್ಟ್‌ಗೆ ಹಿಂದಿರುಗಿಸಬೇಕೆಂಬ ಅಭಿಪ್ರಾಯವಿದೆಯೆಂದು ತಿಳಿದುಬಂದಿದೆ"** ಎಂಬುದಾಗಿ ಪ್ರಕಟಗೊಂಡಿದೆ. ಈ ಗ್ರಹಿಕೆ ಸರಿಯಾದುದಲ್ಲ. ಆ ವರ್ಷ ಮಾಸಿಕ ವೆಚ್ಚವನ್ನು ನಿಲಯದ ವಿದ್ಯಾರ್ಥಿಗಳಿಂದ ಸಂಗ್ರಹಿಸಬೇಕೆಂಬ ಆಲೋಚನೆಯನ್ನು ಕೈಬಿಡಲೆಂದು, ಪ್ರೊ. ಮಾಲಿ ಮದ್ದಣ್ಣನವರೇ ಸ್ವಪ್ರೇರಣೆಯಿಂದ ಮೈಸೂರು ಕುಂಚಿಟಿಗರ ಸಂಘದ ವಿದ್ಯಾರ್ಥಿನಿಲಯದ ಮೇಲಣ ಕಾಳಜಿಯಿಂದ ಮುಂದೆ ಬಂದು, ಆ ಪಟ್ಟಿಯಲ್ಲಿ ಸೂಚಿಸಿರುವವರಿಂದ ಹಣ ಸಂಗ್ರಹಿಸಿ, ಈ ವಿದ್ಯಾರ್ಥಿನಿಲಯಕ್ಕೆ ಕೊಡುಗೆಯಾಗಿ ಟ್ರಸ್ಟ್ ಮೂಲಕ ನೀಡಲಾಗಿದೆಯೇ ಹೊರತು, ಇದು ಸಾಲವಾಗಿರುವುದಿಲ್ಲ.

– ಪ್ರಧಾನ ಸಂಪಾದಕರು

ಬೆಂಗಳೂರು
29 ಮೇ 2004
ಶನಿವಾರ

## ಬಡವರಿಗೂ ಶ್ರೀಮಂತ ಶಿಕ್ಷಣ ನೀಡುತ್ತಿರುವ

# ಶೇಷಾದ್ರಿಪುರಂ ಎಜುಕೇಷನಲ್ ಟ್ರಸ್ಟ್

" ನಾವು ವಿದ್ಯಾರ್ಥಿಗಳಿಂದ ದುಬಾರಿ ಶುಲ್ಕ ವಸೂಲಿ ಮಾಡುವುದಿಲ್ಲ, ಪಡೆದ ಹಣಕ್ಕೆ ಪ್ರತಿಯೊಂದಕ್ಕೂ ರಶೀದಿ ನೀಡುತ್ತೇವೆ. ಮುಖ್ಯವಾಗಿ ಕೆಳ ಮಧ್ಯಮ ಮತ್ತು ಮಧ್ಯಮ ವರ್ಗದ ಕುಟಂಬಗಳ ಪ್ರತಿಭಾವಂತ ಮಕ್ಕಳಿಗೆ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯು ಆಶಾ ಕೇಂದ್ರವಾಗಿದೆ" ಎಂದು ಹೇಳುತ್ತಾರೆ ಕಾರ್ಯದರ್ಶಿ ಕೃಷ್ಣಪ್ಪ.

ಶೇಷಾದ್ರಿಪುರಂ ಎಜುಕೇಷನಲ್ ಟ್ರಸ್ಟ್ ಬೆಂಗಳೂರಿನ ಪ್ರತಿಷ್ಠಿತ ಶಿಕ್ಷಣ ಸಂಸ್ಥೆಗಳಲ್ಲಿ ಒಂದು. ಎಲ್ಲಾ ರೀತಿಯ ಹಾಗೂ ಎಲ್ಲಾ ಹಂತದ ಶಿಕ್ಷಣವನ್ನೂ ಈ ಸಂಸ್ಥೆ ನೀಡುತ್ತಿದೆ. 1930 ರಿಂದ 1936 ರವರೆಗೆ 'ಸ್ತ್ರೀ ಸಮಾಜ' ಹಾಗೂ 1936 ರಿಂದ 1980ರವರೆಗೆ ಶೇಷಾದ್ರಿಪುರಂ ಎಜುಕೇಷನಲ್ ಅಸೋಸಿಯೇಷನ್ ಹೆಸರಿನಲ್ಲಿ ತನ್ನ ಶೈಕ್ಷಣಿಕ ಸೇವೆಯನ್ನು ಸಲ್ಲಿಸಿದ ಈ ಟ್ರಸ್ಟ್ 1988ರಲ್ಲಿ 'ಸ್ವರ್ಣ ಜಯಂತಿ'ಯನ್ನು ಆಚರಿಸಿಕೊಂಡಿತು.

1930 ರಲ್ಲಿ ಈ ಟ್ರಸ್ಟ್ 'ಸ್ತ್ರೀ ಸಮಾಜ'ದ ಹೆಸರಲ್ಲಿ ಆರಂಭಿಸಿದ್ದು ಪ್ರೈಮರಿ ಮತ್ತು ಮಿಡಲ್ ಸ್ಕೂಲ್ ಮಾತ್ರ. 1939ರಲ್ಲಿ ಬಾಲಕರು ಹಾಗೂ ಬಾಲಕಿಯರಿಗಾಗಿ ಹೈಸ್ಕೂಲನ್ನು ಆರಂಭಿಸಲಾಯಿತು. ಬೆಂಗಳೂರು ನಗರ ಸುಧಾರಣಾ ಸಮಿತಿಯ ಅಧ್ಯಕ್ಷರಾಗಿದ್ದ ಡಬ್ಲ್ಯೂ. ಎಚ್. ಹನುಮಂತಪ್ಪ ಅವರ ಶಿಫಾರಸ್ಸಿನೊಂದಿಗೆ 1944ರಲ್ಲಿ ಸಿಟಿ ಮುನಿಸಿಪಲ್ ಕೌನ್ಸಿಲ್ ಈ ಶಾಲೆಗೆ ನಿವೇಶನವೊಂದನ್ನು ಮಂಜೂರು ಮಾಡಿತು. ಆಗ ಶಿಕ್ಷಣ ಸಚಿವರಾಗಿದ್ದ ಡಾ. ಟಿ.ಸಿ.ಎಂ. ರಾಯನ್ ಅವರಿಂದ 1945 ರಲ್ಲಿ ಕಟ್ಟಡಕ್ಕೆ ಅಸ್ತಿಭಾರ ಹಾಕಲ್ಪಟ್ಟು 1952 ರಲ್ಲಿ ಆಗಿನ ಮುಖ್ಯಮಂತ್ರಿಗಳಾದ ಕೆಂಗಲ್ ಹನುಮಂತಯ್ಯನವರಿಂದ ಕಟ್ಟಡಗಳ ಉದ್ಘಾಟನೆ ನೆರವೇರಿತು.

1939 ರಿಂದ 1954ರವರೆಗೆ ಸಂಸ್ಥಾಪಕ ಮುಖ್ಯೋಪಾಧ್ಯಾಯರಾಗಿ ದುಡಿದ ಕೆ. ಸುಬ್ಬಣ್ಣನವರ ಸೇವೆ ಸ್ಮರಣೀಯ. ಶಾಲೆಯು ಪ್ರಖ್ಯಾತವಾಗಲು ಮತ್ತು ಅತ್ಯುತ್ತಮ ವಿದ್ಯಾರ್ಥಿಗಳನ್ನು ರೂಪಿಸಲು ಇವರ ಸೇವೆ ಗಣನೀಯ. ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ವೀರೇಂದ್ರ ಹೆಗ್ಗಡೆ, ಶ್ರೀರಾಮಕೃಷ್ಣಾಶ್ರಮದ ಸ್ವಾಮೀಜಿ ಗೌತಮಾನಂದರು ಮುಂತಾದವರಿಗೆ ಶೈಕ್ಷಣಿಕ ತಳಹದಿ ಈ ಶಾಲೆ ಯಿಂದಲೇ ದೊರೆತಿದೆ ಎಂಬುದೇ ಈ ಶಾಲೆಯ ಹೆಗ್ಗಳಿಕೆಗೆ ಪ್ರತ್ಯಕ್ಷ ಸಾಕ್ಷಿಯೆನ್ನಬಹುದು.

1960 ಹಾಗೂ 1966 ರಲ್ಲಿ ಈ ಶಾಲೆಯ ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗಳಿಬ್ಬರು ರಾಜ್ಯಕ್ಕೆ ಮೊದಲ ರ್‍ಯಾಂಕ್ ಗಳಿಸಿದ್ದು ಈ ಶಾಲೆಯ ಹೆಗ್ಗಳಿಕೆ. ಸಾರ್ವಜನಿಕರ ವಿಶ್ವಾಸ, ಮನ್ನಣೆ ಹಾಗೂ ಗುಣಮಟ್ಟದ ಶಿಕ್ಷಣದ ಆಕಾಂಕ್ಷೆಯಿಂದಾಗಿ ಸಂಸ್ಥೆಯು ಪದವಿ ಪೂರ್ವ ತರಗತಿಗಳನ್ನು ಕ್ರಮೇಣ ಆರಂಭಿಸಿತು.

ಶಾಲೆಯ ಸರ್ವತೋಮುಖ ಅಭಿವೃದ್ಧಿ ನಿಟ್ಟಿನಲ್ಲಿ ಬಿ. ಕೃಷ್ಣಸ್ವಾಮಿ ಐಯ್ಯಂಗಾರ್, ಎಂ.ವಿ. ವೀರಪ್ಪ ಸಿ. ಗೋಪಾಲಕೃಷ್ಣ ಕೆ.ಟಿ. ಅಪ್ಪಣ್ಣ ಸಿ.ಡಿ.ಗೋಪಾಲ ಐಯ್ಯಂಗಾರ್, ಬಿ.ವಿ. ರಾಮರಾವ್, ಎಚ್.ಎನ್. ತಮ್ಮಯ್ಯ, ಜಿ.ಕೆ. ಚಿಕ್ಕನರಸಿಂಹಯ್ಯ, ಬಿ.ಎನ್. ಗೋಪಾಲರಾವ್, ಜಿ. ನರಸಿಂಹಮೂರ್ತಿ ಮುಂತಾದವರ ಸೇವೆಯನ್ನು ಶಿಕ್ಷಣ ಸಂಸ್ಥೆಯು ಸದಾ ಸ್ಮರಿಸುತ್ತಿದೆ.

1974 ರಲ್ಲಿ ಪದವಿ ಕಾಲೇಜನ್ನು ಸಂಸ್ಥೆಯು ಆರಂಭಿಸಿತು. ಪ್ರೊ. ವಿ.ವೈ. ಸೋಮಯಾಜುಲು ಅವರು ಪ್ರಾಂಶುಪಾಲರಾಗಿ ಅದರ ಪೂರ್ಣ ಜವಾಬ್ದಾರಿಯನ್ನು ವಹಿಸಿಕೊಂಡರು. 1979 ರಲ್ಲಿ ವಿಜ್ಞಾನ ವಿಭಾಗವು ಸೇರ್ಪಡೆಯಾಯಿತು. 1981–82 ರಲ್ಲಿ ಕನ್ನಡ ಮತ್ತು ಆಂಗ್ಲ ಮಾಧ್ಯಮಗಳಲ್ಲಿ ನರ್ಸರಿ ಶಾಲೆಯನ್ನು ಆರಂಭಿಸಲಾಯಿತು. ಹೀಗೇ ಅಭಿವೃದ್ಧಿ ಪಥದಲ್ಲಿ ನಡೆದ ಶಿಕ್ಷಣ ಸಂಸ್ಥೆಯು 1982 ರಲ್ಲಿ ಪ್ರೌಢಶಾಲೆಯಲ್ಲಿ ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಶಿಕ್ಷಣ ವ್ಯವಸ್ಥೆಯನ್ನು ರೂಪಿಸಿತು. 1983 ರಲ್ಲಿ ಹೆಣ್ಣು ಮಕ್ಕಳ ಪ್ರೌಢಶಾಲೆಯನ್ನೇ ಆರಂಭಿಸಲಾಯಿತು. 1984 ರಲ್ಲಿ ಫಾರ್ಮಸಿ ಹಾಗೂ ಕಾನೂನು ಪದವಿ ಕಾಲೇಜನ್ನು ಪ್ರಾರಂಭಿಸಲಾಯಿತು. 1992–93 ರಲ್ಲಿ ಯಲಹಂಕದಲ್ಲಿ ಪದವಿ ಪೂರ್ವ ಕಾಲೇಜನ್ನು ಆರಂಭಿಸಲಾಯಿತು. ಬಡ ಮಕ್ಕಳಿಗೆ ಇದು ತುಂಬಾ ಸಹಕಾರಿಯಾಯಿತು.

ಪ್ರಸ್ತುತ ಈ ಶಿಕ್ಷಣ ಸಂಸ್ಥೆಯಿಂದ ಎಂ.ಎ. ಕನ್ನಡ ಮತ್ತು ಎಂ.ಎ. ಇಂಗ್ಲೀಷ್ ಸ್ನಾತಕೋತ್ತರ ಪದವಿ ಪಡೆಯಲು ಅವಕಾಶವಿದೆ. ಬಿ.ಬಿ.ಎಂ. ಕೋರ್ಸ್‌ನ್ನು ಕೂಡಾ ಇಲ್ಲಿ ಪಡೆಯಬಹುದಾಗಿದೆ. ಒಟ್ಟಾರೆ ಅತ್ಯಂತ ಪ್ರತಿಷ್ಠಿತ ಸ್ಥಾನಮಾನವನ್ನು ಕಾಯ್ದುಕೊಂಡು, ಸಾಮಾನ್ಯ ಬಡ ಮಕ್ಕಳಿಗೂ ಅತ್ಯುತ್ತಮ ಗುಣಮಟ್ಟದ ಶಿಕ್ಷಣವನ್ನು ದೊರಕಿಸಿಕೊಡುತ್ತಿರುವ ಈ ಶಿಕ್ಷಣ ಸಂಸ್ಥೆಯ ಕಾರ್ಯ ಶ್ಲಾಘನೀಯವಾಗಿದೆ.

ಪ್ರಸಕ್ತ ವರ್ಷದಿಂದ ಸಂಸ್ಥೆ ನಗರದ ಮಾಗಡಿ ಯಲಹಂಕ ನ್ಯೂ ಟೌನ್‌ನಲ್ಲಿ ತನ್ನ ಇನ್ನೊಂದು ಶಾಖೆಯನ್ನು ಆರಂಭಿಸಿದೆ. ಇದು ಸಂಸ್ಥೆ ಪಡೆದಿರುವ ಖ್ಯಾತಿಗೆ ಮತ್ತೊಂದು ಗರಿ ಎನ್ನುವುದರಲ್ಲಿ ಎರಡು ಮಾತಿಲ್ಲ.

ಶೇಷಾದ್ರಿಪುರಂ ಎಜುಕೇಷನಲ್ ಟ್ರಸ್ಟ್ ನಡೆಸುತ್ತಿರುವ ಎಲ್ಲ ಶಿಕ್ಷಣ ಸಂಸ್ಥೆಗಳಿಗೆ ಕರ್ನಾಟಕ ಸರ್ಕಾರ ಹಾಗೂ ಇತರ ಸೂಕ್ತ ಪ್ರಾಧಿಕಾರಗಳು ಮಾನ್ಯತೆ ನೀಡಿವೆ. ಸಂಸ್ಥೆ ನಿರ್ವಹಿಸುತ್ತಿರುವ ಬಹುತೇಕ ಶಾಲಾ-ಕಾಲೇಜುಗಳಿಗೆ ಸರ್ಕಾರಿ ಅನುದಾನ ಲಭ್ಯವಿದೆ.

ಪ್ರಜಾವಾಣಿ, ಭಾನುವಾರ 23ನೇ ಮೇ 2004 ;



ಬೆಂಗಳೂರು ಬ್ರಹ್ಮ ಸಮಾಜದ ಸದಸ್ಯರು ಶನಿವಾರ ಬೆಂಗಳೂರಿನಲ್ಲಿ ರಾಜಾರಾಮ ಮೋಹನ್ ರಾಯ್ ಪ್ರತಿಮೆಗೆ ಮಾಲಾರ್ಪಣೆ ಮಾಡುವ ಮೂಲಕ ರಾಯ್ ಅವರ 232ನೇ ಜನ್ಮದಿನವನ್ನು ಆಚರಿಸಿದರು.

ಬೆಂಗಳೂರು ವಿಜಯ
ಭಾನುವಾರ 23 ಮೇ 2004



ರಾಜಾರಾಂ ಮೋಹನ್‌ರಾಯ್ 232ನೇ ಜನ್ಮದಿನೋತ್ಸವವನ್ನು ಬೆಂಗಳೂರು ಬ್ರಹ್ಮ ಸಮಾಜದ ಸದಸ್ಯರು ನಗರದಲ್ಲಿ ಶನಿವಾರ ಆಚರಿಸಿದರು.

ಪ್ರಜಾವಾಣಿ, ಗುರುವಾರ 13ನೇ ಮೇ 2004 ಪುಟ 5

# 'ಜಾತೀಯತೆ ತೊಡೆದುಹಾಕಲು ಅಂತರ್‌ಜಾತೀಯ ವಿವಾಹ'

ಬೆಂಗಳೂರು, ಮೇ 12 – ಸಮಾಜದಲ್ಲಿ ಜಾತೀಯತೆ ತೊಡೆದು ಹಾಕಲು ಮತ್ತು ಶಾಂತಿ ಸ್ಥಾಪನೆಗಾಗಿ ಅಂತರ್‌ಜಾತೀಯ ವಿವಾಹಗಳನ್ನು ಪ್ರೋತ್ಸಾಹಿಸುವುದು ಅಗತ್ಯ ಎಂದು ರಾಜ್ಯಸಭಾ ಸದಸ್ಯ ಎಂ.ವಿ. ರಾಜಶೇಖರನ್ ಇಂದು ಇಲ್ಲಿ ಹೇಳಿದರು.

ನಗರದ ಗಾಂಧಿ ಫೋರಂ ಮತ್ತು ಶ್ರೀ ಸಾಯಿ ಮಂದಿರ ಟ್ರಸ್ಟ್ ಇವರ ಸಂಯುಕ್ತ ಶ್ರಯದಲ್ಲಿ ಏರ್ಪಡಿಸಿದ್ದ ಸಾಯಿ ಮಂದಿರ ಟ್ರಸ್ಟ್‌ನ 30ನೇ ವಾರ್ಷಿಕೋತ್ಸವ ಹಾಗೂ ಸಾಮೂಹಿಕ ವಿವಾಹ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ ಅವರು 800 ವರ್ಷಗಳ ಹಿಂದೆ ಬಸವಣ್ಣನವರು ಇಂತಹ ವಿವಾಹ ಮಾಡಿಸಿದ್ದರು ಎಂದರು.

ಮಹಾತ್ಮ ಗಾಂಧೀಜಿಯವರು ಕೂಡ ಅಂತರಜಾತೀಯ ವಿವಾಹಗಳನ್ನು ಬೆಂಬಲಿಸಿದವರು ಎಂದು ಹೇಳಿದರು. ಎಲ್ಲಾ ಸಮಸ್ಯೆಗಳಿಗೆ ಮೂಲವಾದ ಜನಸಂಖ್ಯಾ ಸ್ಫೋಟ ತಡೆಯಲು ಒಂದೇ ಮಗು ಪಡೆಯುವ ಪ್ರತಿಜ್ಞೆಯನ್ನು ಕೈಗೊಳ್ಳಬೇಕೆಂದು ನೂತನ ದಂಪತಿಗಳಿಗೆ ಕಿವಿಮಾತು ಹೇಳಿದರು.

ಮುಖ್ಯ ಅತಿಥಿಗಳಾಗಿ ಮಾತನಾಡಿದ 'ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್' ದಿನಪತ್ರಿಕೆಯ ಪ್ರಕಾಶಕ ಕೆ.ಶಂಕರನ್ ನಾಯರ್ 'ಗಾಂಧಿ ಫೋರಂ' ಮತ್ತು 'ಸಾಯಿ ಮಂದಿರ ಟ್ರಸ್ಟ್' ನಡೆಸುತ್ತಿರುವ ಸಾಮೂಹಿಕ ವಿವಾಹಗಳು ಇತರರಿಗೆ ಮಾದರಿಯಾಗಿವೆ. ಇದರ ರೂವಾರಿ, ಮಾಜಿ ಮೇಯರ್ ವೈ. ರಾಮಚಂದ್ರ ಅವರು ಅಭಿನಂದನಾರ್ಹರು ಎಂದರು.



ಬೆಂಗಳೂರಿನ ಶ್ರೀ ಸಾಯಿ ಮಂದಿರದಲ್ಲಿ ಬುಧವಾರ ಗಾಂಧಿ ಫೋರಮ್ ಏರ್ಪಡಿಸಿದ್ದ ಸಾಮೂಹಿಕ ವಿವಾಹ ಕಾರ್ಯಕ್ರಮದಲ್ಲಿ ದಾಂಪತ್ಯಜೀವನಕ್ಕೆ ಅಡಿಯಿಟ್ಟ ಹೊಸ ಜೋಡಿಗಳು.

ನೂತನ ವಧು, ವರರಿಗೆ ವೈ. ರಾಮಚಂದ್ರ ದಂಪತಿಗಳು ಮಾಂಗಲ್ಯ ವಿತರಣೆ ಮಾಡಿದರು. ವಿವಿಧ ಜನಾಂಗದ ಐದು ಜೋಡಿಗಳು ಈ ಸಂದರ್ಭದಲ್ಲಿ ದಾಂಪತ್ಯ ಜೀವನಕ್ಕೆ ಕಾಲಿಟ್ಟರು.

ಈ ಸಂದರ್ಭದಲ್ಲಿ ಪತ್ರಕರ್ತರಾದ ಇ.ವಿ. ಸತ್ಯನಾರಾಯಣ ಹಾಗೂ ಶಂಕರನ್ ನಾಯರ್ ಅವರಿಗೆ ಗಾಂಧಿ ಫೋರಂ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಮಾಜಿ ಮೇಯರ್ ಕೆ.ಎಂ.ನಂಜಪ್ಪ, ಗಾಂಧಿ ಸ್ಮಾರಕ ನಿಧಿಯ ಎಚ್.ಆರ್. ದಾಸೇಗೌಡ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ಡಬ್ಲ್ಯು.ಪಿ.ಕೃಷ್ಣ ಅವರು ಉಪಸ್ಥಿತರಿದ್ದರು. ಗಾಂಧಿ ಫೋರಂನ ಸ್ಥಾಪಕ ಕಾರ್ಯದರ್ಶಿ ಪ್ರೊ. ಎನ್. ಚಿಕ್ಕಣ್ಣ ಸ್ವಾಗತಿಸಿದರು. ಸಾಯಿಮಂದಿರ ಟ್ರಸ್ಟ್‌ನ ಧರ್ಮದರ್ಶಿ ಆರ್.ಆನಂದ ವಂದಿಸಿದರು.




'ವಿಶ್ವ ರೆಡ್ ಕ್ರಾಸ್ ದಿನಾಚರಣೆ'ಯನ್ನು ರಾಜ್ಯಪಾಲ ಟಿ.ಎನ್. ಚತುರ್ವೇದಿ ಶನಿವಾರ ಬೆಂಗಳೂರಿನಲ್ಲಿ ಉದ್ಘಾಟಿಸಿದರು. ಭಾರತದ ರೆಡ್ ಕ್ರಾಸ್ ಸಮಾಜದ ಕರ್ನಾಟಕ ಘಟಕದ ಉಪಾಧ್ಯಕ್ಷ ಡಾ| ಡಿ.ಎಂ. ನಂಜುಂಡಪ್ಪ, ಪದ್ಮಶ್ರೀ ಪ್ರಶಸ್ತಿ ಪುರಸ್ಕೃತ ಬಿ.ಎಲ್.ಎಸ್. ಮೂರ್ತಿ ಮುಂತಾದವರು ಇದ್ದಾರೆ.

# ರೆಡ್‌ಕ್ರಾಸ್ ಪರೀಕ್ಷೆಯಲ್ಲೂ ಬಾಲಕಿಯರದ್ದೇ ಮೇಲುಗೈ

**ಕನ್ನಡಪ್ರಭ ವಾರ್ತೆ, ಬೆಂಗಳೂರು, ಮೇ 8**

ಭಾರತೀಯ ರೆಡ್ ಕ್ರಾಸ್ ಸೊಸೈಟಿ ವಿದ್ಯಾರ್ಥಿಗಳಲ್ಲಿ ರೆಡ್ ಕ್ರಾಸ್ ಕುರಿತು ಜಾಗೃತಿ ಉಂಟು ಮಾಡುವ ಉದ್ದೇಶದಿಂದ ನಡೆಸುವ ಜೂನಿಯರ್ ರೆಡ್ ಕ್ರಾಸ್ ಪರೀಕ್ಷೆಯಲ್ಲೂ ವಿದ್ಯಾರ್ಥಿನಿಯರದೇ ಮೇಲುಗೈ.

ಮೊದಲ ಮೂರು ರ‍್ಯಾಂಕುಗಳನ್ನು ವಿದ್ಯಾರ್ಥಿನಿಯರೇ ಪಡೆದಿದ್ದಾರೆ. ಬೆಳಗಾವಿಯ ಗೋಮಟೇಶ್ವರ ಪ್ರೌಢಶಾಲೆಯ ಭಾಗ್ಯಲಕ್ಷ್ಮಿ ಸಿ. ಕುಲ್ಲಳ್ಳಿ ಎಂಬ ವಿದ್ಯಾರ್ಥಿನಿ ಪ್ರಥಮ ರ‍್ಯಾಂಕ್ ಪಡೆದಿದ್ದಾಳೆ. ಚಿಕ್ಕಮಗಳೂರಿನ ಅಭಿನವ ವಿದ್ಯಾತೀರ್ಥ ಬಾಲಿಕಾ ಪ್ರೌಢಶಾಲೆಯ ಮೂವರು ವಿದ್ಯಾರ್ಥಿನಿಯರಾದ ಎನ್.ಎಸ್. ಗೀತಾ ಎರಡನೇ ರ‍್ಯಾಂಕ್ ಪಡೆದರೆ, ಕೆ. ಅಮೃತಾ ಮತ್ತು ಆರ್. ದೀಪಿಕಾ ಮೂರನೇ ರ‍್ಯಾಂಕ್ ಹಂಚಿಕೊಂಡಿದ್ದಾರೆ.

ಕಳೆದ ವರ್ಷ ನವೆಂಬರ್ ತಿಂಗಳಲ್ಲಿ ರಾಜ್ಯದ 19 ಜಿಲ್ಲೆಗಳ 4,270 ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತಿದ್ದರು. ಆ ಪೈಕಿ 898 ಮಂದಿ ಪ್ರಥಮ ದರ್ಜೆ, 758 ವಿದ್ಯಾರ್ಥಿಗಳು ದ್ವಿತೀಯ ದರ್ಜೆ ಪಡೆದಿದ್ದಾರೆ.

ಭಾರತೀಯ ರೆಡ್ ಕ್ರಾಸ್ ಸೊಸೈಟಿಯ ರಾಜ್ಯ ಶಾಖೆ ಶನಿವಾರ ವಿಶ್ವ ರೆಡ್ ಕ್ರಾಸ್ ದಿನಾಚರಣೆ ಅಂಗವಾಗಿ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ರ‍್ಯಾಂಕ್ ಗಳಿಸಿದ ವಿದ್ಯಾರ್ಥಿನಿಯರಿಗೆ ರಾಜ್ಯಪಾಲ ಟಿ.ಎನ್. ಚತುರ್ವೇದಿ ಅವರು ಪ್ರಮಾಣ ಪತ್ರ ವಿತರಿಸಿದರು.

ಕಳೆದ ಸಾಲಿನಲ್ಲಿ ರಕ್ತದಾನ ಶಿಬಿರ ಏರ್ಪಡಿಸಿದ ಹಲವಾರು ಕಾಲೇಜುಗಳು ಹಾಗೂ ಸಂಘ ಸಂಸ್ಥೆಗಳಿಗೆ ಈ ಸಂದರ್ಭದಲ್ಲಿ ರೋಲಿಂಗ್ ಶೀಲ್ಡ್ ಮತ್ತು ಪ್ರಮಾಣ ಪತ್ರಗಳನ್ನು ವಿತರಿಸಲಾಯಿತು.

ನಗರದ ಆರ್.ವಿ. ಎಂಜಿನಿಯರಿಂಗ್ ಕಾಲೇಜಿಗೆ ರಾಜ್ಯಪಾಲರ ರೋಲಿಂಗ್ ಶೀಲ್ಡ್, ಬಿಎಂಎಸ್ ಮಹಿಳಾ ಕಾಲೇಜಿಗೆ ಮುಖ್ಯಮಂತ್ರಿಗಳ ರೋಲಿಂಗ್ ಶೀಲ್ಡ್ ವಿತರಿಸಲಾಯಿತು.

ಒಟ್ಟು 34 ಸಂಘ ಸಂಸ್ಥೆಗಳು ಹಾಗೂ ಕಾಲೇಜುಗಳು ಬಹುಮಾನ ಗಳಿಸಿವೆ.

ವಿಶ್ವ ರೆಡ್ ಕ್ರಾಸ್ ದಿನಾಚರಣೆ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದ ರಾಜ್ಯಪಾಲ ಟಿ.ಎನ್. ಚತುರ್ವೇದಿ ಅವರು ಸಮಾಜದಲ್ಲಿನ ತಾರತಮ್ಯ ನಿವಾರಣೆಗೆ ರೆಡ್ ಕ್ರಾಸ್‌ನಂತಹ ಮಹತ್ವದ ಸಂಸ್ಥೆಗಳ ಕಾರ್ಯಕ್ರಮಗಳು ಸಹಾಯಕವಾಗುತ್ತವೆ.. ರೆಡ್ ಕ್ರಾಸ್ ಒಂದು ಚಳವಳಿ. ಈ ಚಳವಳಿಯನ್ನು ಬಲಪಡಿಸುವ ಕಾರ್ಯದಲ್ಲಿ ಯುವಜನರು ಮುಂದಾಗಬೇಕು ಎಂದು ಹೇಳಿದರು.

ಈ ಸಂದರ್ಭದಲ್ಲಿ ರೆಡ್ ಕ್ರಾಸ್ ಸೊಸೈಟಿಯ ಮಾಜಿ ಗೌರವ ಖಜಾಂಚಿ ಮತ್ತು ಖ್ಯಾತ ಸಮಾಜ ಸೇವಕ ಪದ್ಮಶ್ರೀ ಬಿ.ಎಲ್.ಎಸ್. ಮೂರ್ತಿ ಅವರನ್ನು ರಾಜ್ಯಪಾಲ ಟಿ.ಎನ್. ಚತುರ್ವೇದಿ ಅವರು ಸನ್ಮಾನಿಸಿದರು. ಕಾರ್ಯಕ್ರಮದಲ್ಲಿ ಸೊಸೈಟಿ ಉಪಾಧ್ಯಕ್ಷ ಡಾ|ಡಿ.ಎಂ. ನಂಜುಂಡಪ್ಪ, ಪ್ರೊ|ಎಂ. ಮುನಿಯಮ್ಮ, ಡಾ|ಎನ್.ಜಿ. ನಾರಾಯಣ, ಖಜಾಂಚಿ ಡಬ್ಲ್ಯೂ.ಪಿ. ಕೃಷ್ಣ ಮತ್ತಿತರರು ಭಾಗವಹಿಸಿದ್ದರು.

ಉದಯವಾಣಿ

ಭಾನುವಾರ 9 ಮೇ 2004

# ರೆಡ್‌ಕ್ರಾಸ್ ಸಂಸ್ಥೆ ಸೇವೆ: ರಾಜ್ಯಪಾಲರ ಮೆಚ್ಚುಗೆ

ಬೆಂಗಳೂರು, ಮೇ 8: ಸಾರ್ವಜನಿಕರು ಮತ್ತು ಸಂಘ ಸಂಸ್ಥೆಗಳ ಸಹಭಾಗಿತ್ವದಿಂದ ರೆಡ್‌ಕ್ರಾಸ್ ಸಂಸ್ಥೆಯ ಸೇವೆ ಜನಾಂದೋಲನ ಆಗಬೇಕು ಎಂದು ರಾಜ್ಯಪಾಲ ಟಿ.ಎನ್. ಚತುರ್ವೇದಿ ಇಂದು ಇಲ್ಲಿ ಅಭಿಪ್ರಾಯಪಟ್ಟರು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಆಯೋಜಿಸಿದ್ದ ವಿಶ್ವ ರೆಡ್‌ಕ್ರಾಸ್ ದಿನದ ಸಮಾರಂಭದಲ್ಲಿ ಅತ್ಯುತ್ತಮ ಸೇವೆ ಸಲ್ಲಿಸಿದ ಸಂಘ ಸಂಸ್ಥೆಗಳಿಗೆ ಬಹುಮಾನ ವಿತರಿಸಿ ಮಾತನಾಡಿದ ಅವರು, ರೆಡ್‌ಕ್ರಾಸ್ ಸಂಸ್ಥೆ ಸಲ್ಲಿಸುತ್ತಿರುವ ಅನನ್ಯ ಸೇವೆಯಲ್ಲಿ ವಿವಿಧ ಸಾಮಾಜಿಕ ಸಂಘಟನೆಗಳೂ ಭಾಗಿಯಾಗಬೇಕು. ವಿಶೇಷವಾಗಿ ವಿದ್ಯಾರ್ಥಿಗಳು ಮತ್ತು ಯುವ ಜನರು ಸಂಸ್ಥೆಯ ಕಾರ್ಯಕ್ರಮದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕು ಎಂದು ವಿನಂತಿಸಿದರು.

ಸಮರ ಸಂದರ್ಭಗಳಲ್ಲಿ ರೆಡ್‌ಕ್ರಾಸ್ ಸಂಸ್ಥೆ ಯಾವುದೇ ಅತ್ಯುತ್ತಮ ಸೇವೆ ಸಲ್ಲಿಸಿದ ಹೆಗ್ಗಳಿಕೆ ಹೊಂದಿರುವ ರೆಡ್‌ಕ್ರಾಸ್ ಸಂಸ್ಥೆ, ಜಾತಿ, ಲಿಂಗ, ವರ್ಣಬೇಧವಿಲ್ಲದ ಸೇವೆಯಲ್ಲಿ ತನ್ನನ್ನು ತೊಡಗಿಸಿಕೊಂಡಿದೆ. ಮಾನವೀಯತೆ ಇದರ ಮುಖವಾಗಿದ್ದು, ಸಮಾಜದ ಯಾವುದೇ ಸಂಸ್ಥೆ ನೀಡದ ಕೊಡುಗೆಯನ್ನು ನೀಡುತ್ತ ಬಂದಿದೆ ಎಂದರು.

ರಕ್ತದಾನದಂತಹ ಮಹತ್ತರ ಸೇವೆ ಮಾಡುತ್ತಿರುವ ಈ ಸಂಸ್ಥೆ ರಾಜ್ಯದಲ್ಲಿಯೂ ಹೆಮ್ಮರವಾಗಿ ಬೆಳೆದಿದೆ. ರಕ್ತದಾನದ ಬಗ್ಗೆ ವಿಶೇಷವಾಗಿ ವಿದ್ಯಾರ್ಥಿಗಳಲ್ಲಿ ಅರಿವು ಮೂಡಿಸುವ ಸಲುವಾಗಿ ಪರೀಕ್ಷೆಗಳನ್ನು ನಡೆಸಿರುವುದು ಮೆಚ್ಚುಗೆಗೆ ಅರ್ಹವಾಗಿದೆ ಎಂದು ರಾಜ್ಯಪಾಲರು ಹೇಳಿದರು.

ಸಂಸ್ಥೆಯ ಉಪಾಧ್ಯಕ್ಷ ಡಾ. ಡಿ.ಎಂ. ನಂಜುಂಡಪ್ಪ ಮಾತನಾಡಿ, ರೆಡ್‌ಕ್ರಾಸ್ ಸಂಸ್ಥೆ ಯಾವುದೇ ತಾರತಮ್ಯವಿಲ್ಲದೇ ಮನುಷ್ಯರಿಗೆ ಸೇವೆ ಸಲ್ಲಿಸುತ್ತಿರುವ ಸಂಸ್ಥೆಯಾಗಿದ್ದು, ಸಾರ್ವಜನಿಕರು ಇದರ ಜತೆ ಕೈ ಜೋಡಿಸಬೇಕು ಎಂದರು.

ಪದ್ಮಶ್ರೀ ಪುರಸ್ಕೃತರಾದ ಸಂಸ್ಥೆಯ ಮಾಜಿ ಖಜಾಂಚಿ ಬಿ.ಎಲ್.ಎಸ್. ಮೂರ್ತಿ ಅವರನ್ನು ಇದೇ ಸಂದರ್ಭದಲ್ಲಿ ರಾಜ್ಯಪಾಲರು ಸನ್ಮಾನಿಸಿದರು. ಸಂಸ್ಥೆ ಆಯೋಜಿಸಿದ್ದ ರಾಜ್ಯಮಟ್ಟದ ಪರೀಕ್ಷೆಯಲ್ಲಿ ರ್‍ಯಾಂಕ್ ವಿಜೇತರಾದ ಬೆಳಗಾವಿಯ ಭಾಗ್ಯಲಕ್ಷ್ಮೀ, ಚಿಕ್ಕಮಗಳೂರಿನ ಗೀತಾ ಎನ್.ಎಸ್., ಅಮೃತ ಮತ್ತು ದೀಪಿಕಾ ಅವರುಗಳಿಗೆ ರಾಜ್ಯಪಾಲರು ಪ್ರಮಾಣ ಪತ್ರ ವಿತರಿಸಿದರು.

ಸಂಸ್ಥೆಯ ರಕ್ತನಿಧಿ ಅಧ್ಯಕ್ಷೆ ಮುನಿಯಮ್ಮ, ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ, ಖಜಾಂಚಿ ಡಬ್ಲ್ಯೂ. ಪಿ. ಕೃಷ್ಣ ಮುಂತಾದವರು ಉಪಸ್ಥಿತರಿದ್ದರು.

UDAYAVANI - BANGALORE ಉದಯವಾಣಿ

ಶನಿವಾರ 8 ಮೇ 2004 5

# ಎಂಬಿಎ, ಎಂಸಿಎ: ಪ್ರತ್ಯೇಕ ಸಿಇಟಿಗೆ ತೀರ್ಮಾನ

ಬೆಂಗಳೂರು, ಮೇ 7: ಎಂಬಿಎ ಮತ್ತು ಎಂಸಿಎ ಕಾಲೇಜುಗಳಿಗೆ ಪ್ರತ್ಯೇಕ ಸಾಮಾನ್ಯ ಪ್ರವೇಶ ಪರೀಕ್ಷೆ ನಡೆಸಲು ಕರ್ನಾಟಕ ಖಾಸಗಿ ಸ್ನಾತಕೋತ್ತರ ಕಾಲೇಜುಗಳ ಸಂಘ ನಿರ್ಧರಿಸಿದೆ.

ಈ ವಿಚಾರಕ್ಕೆ ಸಂಬಂಧಿಸಿದಂತೆ ಈಗಾಗಲೇ ವೆಂಕಟರಾಮನ್ ಆಯೋಗಕ್ಕೆ ಮನವಿ ಸಲ್ಲಿಸಲಾಗಿದ್ದು, ಆಯೋಗದ ಅನುಮತಿಯನ್ನು ನಿರೀಕ್ಷಿಸಲಾಗುತ್ತಿದೆ ಎಂದು ಸಂಘದ ಅಧ್ಯಕ್ಷ ಸಿ.ಎಸ್. ಕೃಷ್ಣಾರೆಡ್ಡಿ, ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ ಹಾಗೂ ಖಜಾಂಚಿ ಪ್ರೊ। ಎಂ. ಪ್ರಕಾಶ್ ಪತ್ರಿಕಾಗೋಷ್ಠಿಯಲ್ಲಿ ತಿಳಿಸಿದರು.

ಈ ಹಿನ್ನೆಲೆಯಲ್ಲಿ ಈಗಾಗಲೇ ಎಲ್ಲ ಸಿದ್ಧತೆ ನಡೆಸಲಾಗಿದ್ದು, ಜೂನ್ ಕೊನೇ ವಾರದಲ್ಲಿ ಪರೀಕ್ಷೆ ನಡೆಸಲು ನಿರ್ಧರಿಸಲಾಗಿದೆ ಎಂದು ಹೇಳಿದರು.

ರಾಜ್ಯದಲ್ಲಿ ಒಟ್ಟು 60 ಎಂಬಿಎ ಮತ್ತು ಎಂಸಿಎ ಕಾಲೇಜುಗಳಿವೆ. ಇವುಗಳಲ್ಲಿ 40 ಕಾಲೇಜುಗಳು ಸಂಘದ ಸದಸ್ಯತ್ವ ಪಡೆದಿದ್ದು, ಈ ಕಾಲೇಜುಗಳಿಗೆ ಸಂಘ ವತಿಯಿಂದ ನಡೆಸಲಾಗುವ ಪ್ರವೇಶ ಪರೀಕ್ಷೆ ಅನ್ವಯ ಆಗುತ್ತದೆ ಎಂದರು.

ರಾಜ್ಯದ ಒಟ್ಟು ಎಂಬಿಎ ಕಾಲೇಜುಗಳಲ್ಲಿ 2600 ಸೀಟುಗಳಿದ್ದು, ಇವುಗಳಲ್ಲಿ 400 ಸರಕಾರ ಮತ್ತು 2200 ಸೀಟುಗಳು ಖಾಸಗಿ ಸಂಸ್ಥೆಗಳಿಗೆ ಮೀಸಲಾಗಿವೆ ಎಂದರು.

ಸರಕಾರ ವತಿಯಿಂದ ಸಿಇಟಿ ಪ್ರವೇಶ ಪರೀಕ್ಷೆಯು ಮೆರಿಟ್‌ಗೆ ಸಂಬಂಧಿಸಿದೆ. ಆದರೆ ಸಂಘ ವತಿಯಿಂದ ನಡೆಸಲು ನಿರ್ಧರಿಸಲಾಗಿರುವ ಸಾಮಾನ್ಯ ಪ್ರವೇಶ ಪರೀಕ್ಷೆಯು ಎಲ್ಲ ಅಭ್ಯರ್ಥಿಗಳಿಗೂ ಅನ್ವಯ ಆಗುತ್ತದೆ ಎಂದು ತಿಳಿಸಿದರು.

ಈ ಹಿಂದೆ ಸರಕಾರ ಮತ್ತು ಖಾಸಗಿ ಸಂಸ್ಥೆಗಳಿಗೆ ನಿಗದಿಪಡಿಸಿರುವ ಸೀಟು ಹಂಚಿಕೆಯನ್ನು ಯಥಾಸ್ಥಿತಿ ಮುಂದುವರಿಸಬೇಕು ಎಂದು ಆಗ್ರಹಿಸಿದರು.

# ಎಂಸಿಎ, ಎಂಬಿಎ ಸೀಟುಗಳಿಗೆ ಜುಲೈನಲ್ಲಿ ಪರೀಕ್ಷೆ

ಬೆಂಗಳೂರು, ಮೇ 7– ಎಂಬಿಎ ಹಾಗೂ ಎಂಸಿಎ ತರಗತಿಗಳಲ್ಲಿ ಆಡಳಿತ ಮಂಡಳಿಯ ಸೀಟುಗಳಿಗೆ ಪ್ರವೇಶ ಬಯಸುವ ವಿದ್ಯಾರ್ಥಿಗಳಿಗಾಗಿ ಬರುವ ಜುಲೈ ತಿಂಗಳ ಕೊನೆಯ ವಾರದಲ್ಲಿ ಪರೀಕ್ಷೆ ನಡೆಸಲಾಗುವುದು ಎಂದು ನಗರದ ಸಿಎನ್‌ಕೆ ರೆಡ್ಡಿ ಕಾಲೇಜ್ ಆಫ್ ಬಿಸಿನೆಸ್ ಮ್ಯಾನೇಜ್‌ಮೆಂಟ್‌ನ ಅಧ್ಯಕ್ಷ ಸಿ.ಎನ್ ಕೃಷ್ಣಾ ರೆಡ್ಡಿ ಇಂದು ಇಲ್ಲಿ ಹೇಳಿದರು.

ಪತ್ರಿಕಾ ಗೋಷ್ಠಿಯಲ್ಲಿ ಮಾತನಾಡಿದ ಅವರು, ವಿಶ್ವೇಶ್ವರಯ್ಯ ತಾಂತ್ರಿಕ ಮಹಾವಿದ್ಯಾಲಯ ನಡೆಸುವ ಲಿಖಿತ ಪರೀಕ್ಷೆ ಹಾಗೂ ಇದರ ಅಡಿಯಲ್ಲಿ ಬರುವ ಶಿಕ್ಷಣ ಸಂಸ್ಥೆಗಳು ಆಡಳಿತ ಮಂಡಳಿಯ ಸೀಟುಗಳಿಗೆ (ಎಂಬಿಎ ಹಾಗೂ ಎಂಸಿಎ ತರಗತಿಗಳಿಗೆ) ಸಾಮಾನ್ಯ ಪ್ರವೇಶ ಪರೀಕ್ಷೆ ನಡೆಸಬಹುದಾಗಿದೆ ಎಂದು ಸುಪ್ರಿಂ ಕೋರ್ಟ್ ನೀಡಿದ ಅನುಮತಿಯ ಹಿನ್ನೆಲೆಯಲ್ಲಿ ತಾವು ಈ ಕ್ರಮ ತೆಗೆದುಕೊಂಡಿರುವುದಾಗಿ ನುಡಿದರು.

ಕಳೆದ ಶೈಕ್ಷಣಿಕ ವರ್ಷದಲ್ಲಿ ಶೇ 50ರಷ್ಟು ಸರ್ಕಾರಿ ಹಾಗೂ ಶೇ 50ರಷ್ಟು ಕಾಲೇಜಿನ ಆಡಳಿತ ಮಂಡಳಿಯ ಸೀಟು ಇರತಕ್ಕದ್ದು ಎಂದು ಸರ್ಕಾರ ಆದೇಶವನ್ನೇನೋ ಹೊರಡಿಸಿತ್ತು. ಆದರೆ ಶೇ 5ರಷ್ಟು ವಿದ್ಯಾರ್ಥಿಗಳನ್ನು ತುಂಬಲೂ ಸರ್ಕಾರ ವಿಫಲವಾಗಿತ್ತು. ಆಗಲೇ ಪ್ರವೇಶಕ್ಕೆ ಕೊನೆಯ ದಿನಾಂಕವೂ ಮುಗಿದು ಹೋಗಿದ್ದುದರಿಂದ ಪ್ರವೇಶ ಬಯಸಿದ್ದ ವಿದ್ಯಾರ್ಥಿಗಳೆಲ್ಲ ಬೇರೆ ರಾಜ್ಯಗಳ ಕಾಲೇಜುಗಳಿಗೆ ಪ್ರವೇಶ ಪಡೆದುದರಿಂದ, ರಾಜ್ಯದ ಕಾಲೇಜುಗಳು ಭಾರೀ ಪ್ರಮಾಣದ ನಷ್ಟ ಎದುರಿಸಬೇಕಾಯಿತು ಅವರು ತಿಳಿಸಿದರು.

ಎಂಸಿಎ ತರಗತಿಗಳಿಗೆ ಒರಿಸ್ಸಾದ ರೂರ್ಕಿಯಲ್ಲಿ ಮಾತ್ರ ಸಾಮಾನ್ಯ ಪ್ರವೇಶ ಪರೀಕ್ಷೆ ನಡೆಸತಕ್ಕದ್ದು ಎಂದು ಆದೇಶ ಹೊರಡಿಸಲಾಗಿತ್ತು. ಈ ತರಗತಿಗೆ ಪ್ರವೇಶ ಬಯಸುವ ಆಯಾ ರಾಜ್ಯಗಳಲ್ಲಿನ ವಿದ್ಯಾರ್ಥಿಗಳ ಪಟ್ಟಿಯನ್ನು ಕಳುಹಿಸಿಕೊಡಲು ಪ್ರತಿ ಸರ್ಕಾರಗಳಿಗೆ ಸೂಚಿಸಲಾಗಿತ್ತು. ಆದರೆ ಕರ್ನಾಟಕ ಸರ್ಕಾರ ಮಾತ್ರ ವಿದ್ಯಾರ್ಥಿಗಳ ಪಟ್ಟಿಯನ್ನು ಕಳುಹಿಸದೆ ಅವರನ್ನು ತೀರ ಪೇಚಿಗೆ ಸಿಲುಕಿಸಿತ್ತು ಎಂದು ಅವರು ವಿಷಾದಿಸಿದರು.ಶೇಷಾದ್ರಿಪುರ ಎಜುಕೇಶನ್ ಟ್ರಸ್ಟ್‌ನ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ, ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜಿನ ಖಜಾಂಚಿ ಎಂ. ಪ್ರಕಾಶ್ ಪತ್ರಿಕಾಗೋಷ್ಠಿಯಲ್ಲಿ ಉಪಸ್ಥಿತರಿದ್ದರು.

07/05/2004

ಬೆಂಗಳೂರು ಸಂಜೆವಾಣಿ ಶುಕ್ರವಾರ 7, 2004 ಪುಟ 5

# ಖಾಸಗಿಯವರ ಪ್ರತ್ಯೇಕ ಪ್ರವೇಶ ಪರೀಕ್ಷೆ

(ನಮ್ಮ ಪ್ರತಿನಿಧಿಯಿಂದ)

ಬೆಂಗಳೂರು, ಮೇ ೭- ಆಡಳಿತ ಮಂಡಳಿಯ ಎಂ.ಬಿ.ಎ, ಎಂ.ಸಿ.ಎ., ಸೀಟುಗಳ ಪ್ರವೇಶಕ್ಕಾಗಿ ಪ್ರತ್ಯೇಕ ಪ್ರವೇಶ ಪರೀಕ್ಷೆ ನಡೆಸಲು ಕರ್ನಾಟಕ ಖಾಸಗಿ ಸ್ನಾತಕೋತ್ತರ ಕಾಲೇಜುಗಳ ಒಕ್ಕೂಟ ನಿರ್ಧರಿಸಿದೆ.

ಇತ್ತೀಚೆಗೆ ನಡೆದ ಸಂಘದ ಸಭೆಯಲ್ಲಿ ಈ ನಿರ್ಣಯ ಕೈಗೊಳ್ಳಲಾಯಿತು ಎಂದು ಒಕ್ಕೂಟದ ಅಧ್ಯಕ್ಷ ಸಿ.ಎನ್. ಕೃಷ್ಣರೆಡ್ಡಿ ಮತ್ತು ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ ಅವರು ಪತ್ರಿಕಾಗೋಷ್ಠಿಯಲ್ಲಿಂದು ಈ ವಿಷಯ ತಿಳಿಸಿದರು.

ಪ್ರತ್ಯೇಕ ಪ್ರವೇಶ ಪರೀಕ್ಷೆ ನಡೆಸಲು ಅನುಮತಿ ನೀಡುವಂತೆ ಕೋರಿ ವೆಂಕಟರಾಮನ್ ಸಮಿತಿಗೆ ಅರ್ಜಿ ಸಲ್ಲಿಸಲಾಗಿದೆ. ಅನುಮತಿಗಾಗಿ ನಿರೀಕ್ಷೆಯಲ್ಲಿದ್ದೇವೆ ಎಂದು ತಿಳಿಸಿದರು.

ರಾಜ್ಯದಲ್ಲಿ ಎಂ.ಬಿ.ಎ, ಎಂ.ಸಿ.ಎ. ಶಿಕ್ಷಣ ನೀಡುವ ಒಟ್ಟು ಅರವತ್ತು ಶಿಕ್ಷಣ ಸಂಸ್ಥೆಗಳಿದ್ದು, ಈ ಪೈಕಿ ನಲವತ್ತು ಶಿಕ್ಷಣ ಸಂಸ್ಥೆಗಳು ಒಕ್ಕೂಟದ ಪ್ರತ್ಯೇಕ ಪ್ರವೇಶ ಪರೀಕ್ಷೆ ನಡೆಸಲು ಸಮ್ಮತಿಸಿವೆ ಎಂದರು.

(5 ನೇ ಪುಟ ನೋಡಿ)

# ಖಾಸಗಿಯವರ ಪ್ರತ್ಯೇಕ ಪ್ರವೇಶ ಪರೀಕ್ಷೆ

(ಒಂದನೇ ಪುಟದಿಂದ)

### ಫಿಫ್ಟಿ ಫಿಫ್ಟಿ

ಕಳೆದ ಶೈಕ್ಷಣಿಕ ವರ್ಷದಲ್ಲಿ ಸರ್ಕಾರ ಅನುಸರಿಸಿದ 50:50 ಪ್ರಕಾರ ಸೀಟು ಹಂಚಿಕೆಯನ್ನು ಈ ವರ್ಷವೂ ಅನುಷ್ಠಾನಗೊಳಿಸಬೇಕು ಎಂದು ಒತ್ತಾಯಿಸಿದರು.

ಸೀಟು ಹಂಚಿಕೆ ವಿಷಯದಲ್ಲಿ ಸರ್ಕಾರ ವಿಳಂಬ ನೀತಿ ಅನುಸರಿಸದೆ ಕೂಡಲೇ ತನ್ನ ನಿರ್ಧಾರ ಪ್ರಕಟಿಸಬೇಕು ಎಂದು ಆಗ್ರಹಿಸಿದರು.

ಒಕ್ಕೂಟದ ಹಾಗೂ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ಖಜಾಂಚಿ ಪ್ರೊ.ಎಂ. ಪ್ರಕಾಶ್ ಸುದ್ದಿಗೋಷ್ಠಿಯಲ್ಲಿ ಹಾಜರಿದ್ದರು.

KARUNADA SANJE Kannada Evening Daily
ಬೆಂಗಳೂರು ಶುಕ್ರವಾರ : 7-5-2004

ಕರುನಾಡ ಸಂಜೆ

# ಎಂಬಿಎ-ಎಂಸಿಎಗೆ ಪ್ರತ್ಯೇಕ ಸಿಇಟಿ : ಕೃಷ್ಣ

**(ನಮ್ಮ ಪ್ರತಿನಿಧಿಯಿಂದ)**

ಬೆಂಗಳೂರು, ಮೇ 7: ಎಂಬಿಎ-ಎಂಸಿಎ ಕಾಲೇಜುಗಳ ಆಡಳಿತ ಮಂಡಳಿಯ ಸೀಟು ಹಂಚಿಕೆಗೆ ಪ್ರತ್ಯೇಕ ಸಿಇಟಿ ಪರೀಕ್ಷೆಗಳನ್ನು ಕರ್ನಾಟಕ ಖಾಸಗಿ ಸ್ನಾತಕೋತ್ತರ ಸಂಘ ನಡೆಸಲಿದೆ ಎಂದು ಸಂಘದ ಕಾರ್ಯದರ್ಶಿ ಡಬ್ಲ್ಯು.ಪಿ.ಕೃಷ್ಣ ತಿಳಿಸಿದ್ದಾರೆ.

ಪ್ರತ್ಯೇಕ ಸಿಇಟಿ ನಡೆಸಲು ಸರ್ಕಾರದ ಅನುಮತಿ ತೋರಲಾಗಿದೆ ಎಂದು ಅವರು ಪತ್ರಿಕಾಗೋಷ್ಠಿಯಲ್ಲಿ ಇಂದು ತಿಳಿಸಿದರು.

ಸರ್ಕಾರ ಅನುಮತಿ ನೀಡದಿದ್ದರೂ ಜೂನ್ ಕೊನೆ ವಾರದಲ್ಲಿ ಪರೀಕ್ಷೆ ನಡೆಸಲಾಗುವುದು ಎಂದು ತಿಳಿಸಿದ ಅವರು , ಸರ್ಕಾರಿ ಕಾಲೇಜುಗಳಿಗೆ ವಿಶ್ವೇಶ್ವರಯ್ಯ ತಾಂತ್ರಿಕ ಶಿಕ್ಷಣ ಸಂಸ್ಥೆ ಸಿಇಟಿ ಪರೀಕ್ಷೆ ನಡೆಸಲಿದೆ ಎಂದರು.

ವಿದ್ಯಾರ್ಥಿಗಳಿಗೆ ಅನುಕೂಲವಾಗುವ ರೀತಿಯಲ್ಲಿ ಪರೀಕ್ಷೆಯ ವೇಳಾಪಟ್ಟಿ ಸಿದ್ಧಗೊಳಿಸಲಾಗುವುದು ಎಂದು ಕೃಷ್ಣ ಹೇಳಿದರು.

ಆರನೇ ಪುಟಕ್ಕೆ...

# ಎಂಬಿಎ-ಎಂಸಿಎಗೆ ಪ್ರತ್ಯೇಕ ಸಿಇಟಿ : ಕೃಷ್ಣ

...ಮೊದಲಪುಟದಿಂದ

ರಾಜ್ಯದಲ್ಲಿ ಒಟ್ಟು 60 ಎಂಸಿಎ-ಎಂಬಿಎ ಕಾಲೇಜುಗಳಿದ್ದು ಇವುಗಳಲ್ಲಿ 40 ತಮ್ಮ ಸಂಘದ ಸದಸ್ಯತ್ವ ಪಡೆದು ಕೊಂಡಿವೆ ಎಂದು ಅವರು ನುಡಿದರು.

ಕಳೆದ ಶೈಕ್ಷಣಿಕ ವರ್ಷದಲ್ಲಿ 50:50 ಅನುಪಾತವನ್ನು ಸರ್ಕಾರ ನಿರ್ಧರಿಸಿತ್ತು ಪ್ರಸ್ತುತ ಈ ವರ್ಷ ಉಂಟಾಗಿರುವ ಗೊಂದಲ ಕುರಿತಂತೆ ಸ್ಪಷ್ಟ ನಿರ್ಧಾರ ಕೈಗೊಳ್ಳುವಂತೆ ಅವರು ಸರ್ಕಾರವನ್ನು ಆಗ್ರಹಿಸಿದರು.

ರಾಜ್ಯದಲ್ಲಿ ಒಟ್ಟು 2600 ಸಿಇಟಿ ಸೀಟುಗಳಿದ್ದು, 2200 ಖಾಸಗಿ ಮತ್ತು 400 ಸರ್ಕಾರಿ ಸೀಟುಗಳಿವೆ ಎಂದು ಕೃಷ್ಣ ತಿಳಿಸಿದರು. ಪತ್ರಿಕಾಗೋಷ್ಠಿಯಲ್ಲಿ ಸಂಘದ ಅಧ್ಯಕ್ಷ ಸಿ.ಎನ್.ಕೃಷ್ಣ ರೆಡ್ಡಿ, ಕೋಶಾಧಿಕಾರಿ ಪಿ.ಎಂ. ಪ್ರಕಾಶ್ ಉಪಸ್ಥಿತರಿದ್ದರು.

ಕನ್ನಡಪ್ರಭ, ಬೆಂಗಳೂರು ಬುಧವಾರ, 24 ಮಾರ್ಚ್ 2004



ಶೇಷಾದ್ರಿಪುರ ಶಿಕ್ಷಣ ದತ್ತಿಯು ಮಾಗಡಿ ಮುಖ್ಯರಸ್ತೆಯಲ್ಲಿ ನಿರ್ಮಿಸಿರುವ ಶೇಷಾದ್ರಿಪುರ ಪದವಿಪೂರ್ವ ಕಾಲೇಜಿನ ನೂತನ ಕಟ್ಟಡದ ಉದ್ಘಾಟನಾ ಸಮಾರಂಭದ ದೃಶ್ಯ.

ಬೆಂಗಳೂರು ವಿಜಯ
ಭಾನುವಾರ 21 ಮಾರ್ಚ್ 2004

# ಕಾಲೇಜು ಕಟ್ಟಡ ಉದ್ಘಾಟನೆ

ಬೆಂಗಳೂರು, ಮಾ.20- ಮಾಗಡಿ ರಸ್ತೆಯಲ್ಲಿ ನಿರ್ಮಿಸಲಾಗಿರುವ ಶೇಷಾದ್ರಿಪುರಂ ಶಿಕ್ಷಣ ದತ್ತಿಯಶೇಷಾದ್ರಿಪುರಂಸ್ವತಂತ್ರ ಪದವಿಪೂರ್ವ ಕಾಲೇಜಿನ ಕಟ್ಟಡದ ಉದ್ಘಾಟನೆ ಇತ್ತೀಚೆಗೆ ನಡೆಯಿತು. ಸಿದ್ದಗಂಗಾ ಮಠದ ಕಿರಿಯ ಸ್ವಾಮೀಜಿ ಶ್ರೀ ಸಿದ್ದಲಿಂಗ ಸ್ವಾಮೀಜಿ ಕಟ್ಟಡ ಉದ್ಘಾಟಿಸಿದರು.

ಮಾಜಿ ಸಚಿವ ವಿ. ಸೋಮಣ್ಣ ಮಾತನಾಡಿ, ಶಿಕ್ಷಣ ಸಂಸ್ಥೆಯು ಮಧ್ಯಮ ವರ್ಗದ ಜನರಿಗೆ ನೀಡುತ್ತಿರುವ ನಿಸ್ವಾರ್ಥ ಸೇವೆಯನ್ನು ಶ್ಲಾಘಿಸಿದರು. ಕಟ್ಟಡದ ಇನ್ನೆರಡು ಮಹಡಿಗಳ ನಿರ್ಮಾಣಕ್ಕೆ ಅವಶ್ಯವಿರುವ ಹಣವನ್ನು ದಾನ ನೀಡುವುದಾಗಿ ಘೋಷಿಸಿದರು. ಹಾಗೆಯೇ ಮತ್ತೊಂದು ಅಂಗಸಂಸ್ಥೆಯನ್ನು ತೆರೆಯುವಂತೆ ಆಡಳಿತ ಮಂಡಳಿಯನ್ನು ಕೋರಿದರು.

ಇದೇ ಸಂದರ್ಭದಲ್ಲಿ ಬೆಂಗಳೂರು ಮಹಾನಗರ ಪಾಲಿಕೆ ಸದಸ್ಯೆ ಮಹಾದೇವಮ್ಮ ನಾಗರಾಜ್ ಮತ್ತು ದುಂಡೇಗೌಡರನ್ನು ಸನ್ಮಾನಿಸಲಾಯಿತು.

ಶ್ರೀ ಸಿದ್ದಗಂಗಾ ಸ್ವಾಮೀಜಿ ಆಶೀರ್ವಚನ ನೀಡಿ, ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಶ್ರೀ ವೀರೇಂದ್ರ ಹೆಗ್ಗಡೆ, ಕ್ರೀಡಾಪಟು ಪ್ರಕಾಶ್ ಪಡುಕೋಣೆಯಂತಹ ಪ್ರತಿಭಾನ್ವಿತರು ಈ ಕಾಲೇಜಿನ ವಿದ್ಯಾರ್ಥಿಗಳು ಎಂಬುವುದರಿಂದ ಕಾಲೇಜಿನ ಘನತೆ ಅರ್ಥವಾಗುತ್ತದೆ. ಅಲ್ಲದೆ ಹದಿನಾರು ಸಾವಿರ ವಿದ್ಯಾರ್ಥಿಗಳನ್ನು ಹೊಂದಿದ ಮಹಾನ್ ಸಂಸ್ಥೆಯ ನಿಸ್ವಾರ್ಥ ಸೇವೆ, ಮಂಡಳಿಯ ತ್ಯಾಗ, ಉನ್ನತ ಧ್ಯೇಯಗಳು ಸಮಾಜದ ಸುಸ್ಥಿರ ಪ್ರಗತಿಗೆ ಅವಶ್ಯ ಎಂದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ಕೆ.ಎಂ. ನಂಜಪ್ಪ ವಹಿಸಿದ್ದರು. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ ಸ್ವಾಗತಿಸಿದರು.

ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಎಸ್. ಉಮಾಶಂಕರ್ ವಂದಿಸಿದರು. ಉಪನ್ಯಾಸಕ ಡಾ. ಕೊಟ್ರಸ್ವಾಮಿ ಕಾರ್ಯಕ್ರಮ ನಿರೂಪಿಸಿದರು.

ಬೆಂಗಳೂರು ವಿಜಯ
ಬುಧವಾರ 17 ಮಾರ್ಚ್ 2004



ಶೇಷಾದ್ರಿಪುರಂ ಶಿಕ್ಷಣದತ್ತಿ ಸಂಸ್ಥೆ ಮಾಗಡಿ ಮುಖ್ಯರಸ್ತೆಯಲ್ಲಿ ಆರಂಭಿಸಿದ ಪದವಿಪೂರ್ವ ಕಾಲೇಜು ಉದ್ಘಾಟನೆ ಸಮಾರಂಭದಲ್ಲಿ ಶ್ರೀ ಸಿದ್ದಗಂಗಾ ಸ್ವಾಮೀಜಿ, ಶಾಸಕ ವಿ. ಸೋಮಣ್ಣ, ಸಂಸ್ಥೆ ಅಧ್ಯಕ್ಷ ಕೆ.ಎಂ. ನಂಜಪ್ಪ ಹಾಗೂ ಗೌರವ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ ಹಾಜರಿದ್ದರು.

ಮಂಗಳವಾರ 16 ಮಾರ್ಚ್ 2004

ಉದಯವಾಣಿ



ಶೇಷಾದ್ರಿಪುರ ಶಿಕ್ಷಣ ದತ್ತಿ ಬೆಂಗಳೂರಿನ ಮಾಗಡಿ ಮುಖ್ಯರಸ್ತೆಯಲ್ಲಿ ನಿರ್ಮಿಸಿರುವ ನೂತನ ಕಟ್ಟಡ ಉದ್ಘಾಟನಾ ಸಮಾರಂಭದಲ್ಲಿ ಮಾಜಿ ಶಾಸಕ ವಿ. ಸೋಮಣ್ಣ, ಸಂಸ್ಥೆ ಅಧ್ಯಕ್ಷ ಕೆ.ಎಂ. ನಂಜಪ್ಪ ಮತ್ತಿತರರು ಉಪಸ್ಥಿತರಿದ್ದರು.

ಕರುನಾಡ ಸಂಜೆ

16-3-2004



ನಗರದ ಮಾಗಡಿರಸ್ತೆಯಲ್ಲಿ ನೂತನವಾಗಿ ನಿರ್ಮಾಣವಾಗಿರುವ ಶೇಷಾದ್ರಿಪುರಂ ಕಾಲೇಜಿನ ಸಿದ್ಧಗಂಗಾ ಮಠದ ಕಿರಿಯ ಶ್ರೀಗಳಾದ ಶ್ರೀ. ಸಿದ್ದಲಿಂಗ ಮಹಾಸ್ವಾಮಿಗಳು ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ ಮಾಜಿ ಶಾಸಕ ವಿ. ಸೋಮಣ್ಣ, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷರಾದ ಕೆ.ಎಂ. ನಂಜಪ್ಪ ಗೌ. ಕಾರ್ಯದರ್ಶಿಯಾದ ಡಬ್ಲ್ಯೂ.ಪಿ. ಕೃಷ್ಣ ಮತ್ತು ಎನ್.ಆರ್. ಪಂಡಿತರಾಧ್ಯರು ಹಾಜರಿದ್ದರು.

ಸೋಮವಾರ 15-3-2004

ಈ ಸಂಜೆ



ಬೆಂಗಳೂರಿನ ಮಾಗಡಿ ರಸ್ತೆಯಲ್ಲಿ ಶೇಷಾದ್ರಿಪುರ ಶಿಕ್ಷಣ ದತ್ತಿ ನಿರ್ಮಿಸಿರುವ ನೂತನ ಕಟ್ಟಡದ ಉದ್ಘಾಟನೆಯನ್ನು ಸಿದ್ಧಗಂಗಾಮಠದ ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗಸ್ವಾಮೀಜಿ ನೆರವೇರಿಸಿದರು. ಮಾಜಿ ಸಚಿವ ವಿ. ಸೋಮಣ್ಣ, ಸಂಸ್ಥೆ ಅಧ್ಯಕ್ಷ ಕೆ.ಎಂ. ನಂಜಪ್ಪ, ಪ್ರಧಾನ ಕಾರ್ಯದರ್ಶಿ ಡಬ್ಲ್ಯೂ.ಪಿ. ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

ಬೆಂಗಳೂರು ವಿಜಯ
ಮಂಗಳವಾರ 9 ಮಾರ್ಚ್ 2004

# ಭ್ರಷ್ಟಾಚಾರ ನಿರ್ಮೂಲನೆಗೆ ವಕೀಲರು ಮುಂದಾಗಲು ಕರೆ

ಬೆಂಗಳೂರು, ಮಾ.8 - ವಕೀಲರು ಹಾಗೂ ಜನಸಮೂಹವು ಭ್ರಷ್ಟಾಚಾರವನ್ನು ಪ್ರೋತ್ಸಾಹಿಸದೆ ಅದರ ನಿರ್ಮೂಲನೆಗೆ ಪ್ರಾಮಾಣಿಕ ಪ್ರಯತ್ನ ಮಾಡಬೇಕು ಎಂದು ಹೈಕೋರ್ಟ್ ನ್ಯಾಯಮೂರ್ತಿ ಟಿ.ಎಸ್. ಠಾಕೂರ್ ಕರೆ ನೀಡಿದರು.

ಶೇಷಾದ್ರಿಪುರ ಕಾನೂನು ಕಾಲೇಜು ವಾರ್ಷಿಕೋತ್ಸವ ಉದ್ಘಾಟಿಸಿದ ಅವರು, ವಕೀಲರು ಸೇವಾಪರತೆಯನ್ನು ಅಳವಡಿಸಿ ಕೊಳ್ಳಬೇಕು. ಈ ವೃತ್ತಿಯಲ್ಲಿ ಅಭಿವೃದ್ಧಿಯ ಮೌಲ್ಯಮಾಪನವು ಮಾನವೀಯ ಗುಣಾಧಾರಿತವಾಗಿರಬೇಕೆ ಹೊರತು ಧನಾರ್ಜನೆ ಮಾಡುವ ವ್ಯಾಮೋಹವಿರಬಾರದು. ನ್ಯಾಯಾಲಯಗಳ ಮತ್ತು ಕಕ್ಷಿದಾರರ ನಡುವಿನ ಅಂತರವನ್ನು ಕಡಿಮೆಗೊಳಿಸಿ ಶೀಘ್ರ ವಿಲೇವಾರಿ ಮಾಡುವ ಮೂಲಕ ಸಮರ್ಥ ನ್ಯಾಯ ಒದಗಿಸಬೇಕು ಎಂದು ಹೇಳಿದರು.

ನ್ಯಾಯಮೂರ್ತಿ ಎಸ್.ಆರ್. ನಾಯಕ್ ಮಾತನಾಡಿ, ಭ್ರಷ್ಟಾಚಾರ ನಿರ್ಮೂಲನೆಗೆ ವಿದ್ಯಾರ್ಥಿಗಳು ಮುಂದಾಗಬೇಕು. ಕಠಿಣ ಪರಿಶ್ರಮ ವೃತಿಯಲ್ಲಿ ಗೆಲುವನ್ನು ತರುತ್ತದೆ ಎಂದು ವಿದ್ಯಾರ್ಥಿಗಳಿಗೆ ಸಲಹೆ ನೀಡಿದರು.

ಶೇಷಾದ್ರಿಪುರ ಶಿಕ್ಷಣದತ್ತಿಯ ಅಧ್ಯಕ್ಷ ಕೆ.ಎಂ. ನಂಜಪ್ಪ ಅಧ್ಯಕ್ಷತೆ ವಹಿಸಿದ್ದರು. ಗೌರವ ಪ್ರಧಾನ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ, ನ್ಯಾಯಮೂರ್ತಿ ಕೆ. ಭಕ್ತವತ್ಸಲ, ಕಾನೂನು ಕಾಲೇಜು ಆಡಳಿತ ಮಂಡಳಿ ಅಧ್ಯಕ್ಷೆ ಟಿ.ಎನ್. ಮಂಜುಳಾದೇವಿ, ಶಿಕ್ಷಣದತ್ತಿ ಸಹ ಕಾರ್ಯದರ್ಶಿ ಆರ್.. ಕೃಷ್ಣ, ಟ್ರಸ್ಟಿಗಳಾದ ಕೆ. ಕೃಷ್ಣಸ್ವಾಮಿ, ಸರೋಜ ನಂಜಪ್ಪ ಉಪಸ್ಥಿತರಿದ್ದರು.



ಶೇಷಾದ್ರಿಪುರ ಕಾನೂನು ಕಾಲೇಜು ವಾರ್ಷಿಕೋತ್ಸವದಲ್ಲಿ ನ್ಯಾಯಮೂರ್ತಿಗಳಾದ ಟಿ.ಎಸ್. ಠಾಕೂರ್, ಎಸ್.ಆರ್. ನಾಯಕ್, ಕೆ. ಭಕ್ತವತ್ಸಲ, ಶಿಕ್ಷಣದತ್ತಿ ಸಂಸ್ಥೆಯ ಡಬ್ಲ್ಯು.ಪಿ. ಕೃಷ್ಣ, ಟಿ.ಎನ್. ಮಂಜುಳಾದೇವಿ, ಎ.ಜೆ. ಆಶಾ ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ, ಬೆಂಗಳೂರು 8-3-2004

# ಶೇಷಾದ್ರಿಪುರಂ ಕಾಲೇಜು ವಾರ್ಷಿಕೋತ್ಸವ

ಬೆಂಗಳೂರು ಶೇಷಾದ್ರಿಪುರಂ ಕಾನೂನು ಕಾಲೇಜಿನ ವಾರ್ಷಿಕೋತ್ಸವ ಸಮಾರಂಭವನ್ನು ಆಚರಿಸಲಾಯಿತು.

ಈ ಸಮಾರಂಭದ ಉದ್ಘಾಟನೆಯನ್ನು ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಾದ ಟಿ.ಎಸ್. ಠಾಕೂರ್‌ರವರು ಉದ್ಘಾಟಿಸಿದರು. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷರಾದ ಕೆ.ಎಂ. ನಂಜಪ್ಪನವರು ಅಧ್ಯಕ್ಷತೆಯನ್ನು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಾದ ಎಸ್.ಆರ್. ನಾಯಕ್‌ರವರು ಉಪಸ್ಥಿತರಿದ್ದರು. ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಾದ ಕೆ. ಭಕ್ತವತ್ಸಲ ಹಾಗೂ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿಗಳಾದ ಡಬ್ಲ್ಯೂ.ಪಿ. ಕೃಷ್ಣರವರು ಸಮಾರಂಭದಲ್ಲಿ ಅತಿಥಿಗಳಾಗಿ ಭಾಗವಹಿಸಿದ್ದರು. ಕರ್ನಾಟಕದ ಉಚ್ಚ ನ್ಯಾಯಾಲಯದ ಹಿರಿಯ ವಕೀಲರು ಹಾಗೂ ಶೇಷಾದ್ರಿಪುರಂ ಕಾನೂನು ಕಾಲೇಜಿನ ಆಡಳಿತ ಮಂಡಳಿಯ ಅಧ್ಯಕ್ಷರಾದ ಟಿ.ಎನ್. ಮಂಜುಳಾದೇವಿಯವರು, ಶಿಕ್ಷಣ ದತ್ತಿಯ ಸಹ ಕಾರ್ಯದರ್ಶಿಗಳಾದಂತಹ ಆರ್. ಕೃಷ್ಣರವರು, ದತ್ತಿಯ ಟ್ರಸ್ಟಿಗಳಾದಂತಹ ಕೆ. ಕೃಷ್ಣಸ್ವಾಮಿಯವರು ಮತ್ತು ಸರೋಜ ನಂಜಪ್ಪರವರು ಸಮಾರಂಭದಲ್ಲಿ ಉಪಸ್ಥಿತರಿದ್ದರು. ಕಾಲೇಜಿನ ಪ್ರಾಂಶುಪಾಲರಾದ ಎ.ಜಿ. ಆಚಾರವರು ಅತಿಥಿಗಳನ್ನು ಸ್ವಾಗತಿಸಿದರು.

ಈ ಸಮಾರಂಭದ ಉದ್ಘಾಟನಾ ಭಾಷಣ ಮಾಡಿದ ನ್ಯಾಯಮೂರ್ತಿ ಠಾಕೂರ್‌ರವರು ಕಾನೂನು ಪಾಲನೆ ಮತ್ತು ನ್ಯಾಯ ನಿರ್ವಹಣೆ ವ್ಯವಸ್ಥೆಯಲ್ಲಿ ಪಾವಿತ್ರ್ಯತೆಯನ್ನು ಕಾಪಾಡುವುದನ್ನು ಕುರಿತು ಮಾತನಾಡಿದರು. ವಕೀಲರು ಮತ್ತು ಸಾರ್ವಜನಿಕರು ಭ್ರಷ್ಟಾಚಾರವನ್ನು ಪ್ರೋತ್ಸಾಹಿಸದೆ ಅದರ ನಿರ್ಮೂಲನೆಗೆ ಪ್ರಾಮಾಣಿಕವಾಗಿ ಪ್ರಯತ್ನಿಸಬೇಕು ಎಂದು ಹೇಳಿದರು. ಸತ್ಯದ ಅನ್ವೇಷಣೆ ಮತ್ತು ಸೇವಾಪರತೆಯನ್ನು ಅಳವಡಿಸಿಕೊಳ್ಳಬೇಕು. ಈ ವೃತ್ತಿಯಲ್ಲಿ ಅಭಿವೃದ್ಧಿಯ ಮೌಲ್ಯಮಾಪನವು ಮಾನವೀಯ ಗುಣಾಧಾರಿತವಾಗಿರಬೇಕೆ ಹೊರತು ಧನಾರ್ಜನೆಯಲ್ಲ. ನ್ಯಾಯಾಲಯಗಳ ಮತ್ತು ಕಕ್ಷಿದಾರರ ಸಂಖ್ಯೆಯಲ್ಲಿರುವ ಅಂತರವನ್ನು ಕಡಿಮೆಗೊಳಿಸಿ ಶೀಘ್ರ ನ್ಯಾಯ ವಿಲೇವಾರಿ ಮತ್ತು ಸಮರ್ಥ ನ್ಯಾಯ ನಿರ್ವಹಣೆಯಾಗಲು ರಾಷ್ಟ್ರದ ಆರ್ಥಿಕ ವ್ಯವಸ್ಥೆಯು ಮುಖ್ಯ ಪಾತ್ರ ವಹಿಸುತ್ತದೆ ಎಂದು ಅಭಿಪ್ರಾಯಪಟ್ಟರು.

ನ್ಯಾಯಮೂರ್ತಿ ಎಸ್.ಆರ್. ನಾಯಕ್‌ರವರು ವೃತ್ತಿಯ ಗಾಂಭೀರ್ಯವನ್ನು ಎತ್ತಿಹಿಡಿದು ಭ್ರಷ್ಟಾಚಾರವನ್ನು ನಿರ್ಮೂಲನೆ ಮಾಡಬೇಕೆಂದು ವಿದ್ಯಾರ್ಥಿಗಳಿಗೆ ಕರೆಕೊಟ್ಟರು. ಕಠಿಣ ಪರಿಶ್ರಮವೇ ವೃತ್ತಿಯಲ್ಲಿ ಗೆಲುವಿಗೆ ಇರುವ ಮಾರ್ಗವೆಂದು ವಿದ್ಯಾರ್ಥಿಗಳಿಗೆ ತಿಳಿಸಿ ಹೇಳಿದರು. ನ್ಯಾಯಮೂರ್ತಿ ಕೆ. ಭಕ್ತವತ್ಸಲರವರು ಕಾನೂನು ಕಾಲೇಜಿನ ಉಪನ್ಯಾಸದ ಬಗ್ಗೆ ತಮ್ಮ ಅನುಭವವನ್ನು ಹಂಚಿಕೊಂಡರು.



*ಬೆಂಗಳೂರಿನ ಶೇಷಾದ್ರಿಪುರ ಕಾನೂನು ಕಾಲೇಜಿನ ವಾರ್ಷಿಕೋತ್ಸವ ಸಮಾರಂಭದಲ್ಲಿ ನ್ಯಾಯಮೂರ್ತಿಗಳಾದ ಟಿ.ಎಸ್. ಠಾಕೂರ್, ಎಸ್.ಆರ್. ನಾಯಕ್, ಎಸ್.ಆರ್. ಭಕ್ತವತ್ಸಲಂ, ಕೆ.ಎಂ. ನಂಜಪ್ಪ, ಡಬ್ಲ್ಯೂ.ಪಿ. ಕೃಷ್ಣ ಮೊದಲಾದವರು ಪಾಲ್ಗೊಂಡಿದ್ದರು.*



ಶೇಷಾದ್ರಿಪುರಂ ಶಿಕ್ಷಣ ದತ್ತಿ ವತಿಯಿಂದ ಸುನಾಮಿ ಸಂತ್ರಸ್ತರ ಪರಿಹಾರ ನಿಧಿಗಾಗಿ ೬ ಲಕ್ಷ ರೂ.ಗಳನ್ನು ರಾಜ್ಯಪಾಲರಾದ ಟಿ.ಎನ್.ಚತುರ್ವೇದಿ ಅವರಿಗೆ ಸಂಸ್ಥೆಯ ಅಧ್ಯಕ್ಷ ಕೆ.ಎಂ.ನಂಜಪ್ಪ ಅವರು ನೀಡಿದರು. ರೆಡ್‌ಕ್ರಾಸ್ ಉಪಾಧ್ಯಕ್ಷ ಡಾ||ಎಸ್.ಚಂದ್ರಶೇಖರ್ ಶೆಟ್ಟಿ, ಸಂಸ್ಥೆಯ ಕಾರ್ಯದರ್ಶಿ ಡಬ್ಲ್ಯೂ.ಪಿ.ಕೃಷ್ಣ, ರಕ್ತನಿಧಿ ಅಧ್ಯಕ್ಷ ರಾಜು ಚಂದ್ರಶೇಖರ್ ಇತರರು ಈ ಸಂದರ್ಭದಲ್ಲಿ ಹಾಜರಿದ್ದರು.

# 'ಆದಿಪುರಾಣ: ಸಾಂಸ್ಕೃತಿಕ ಮುಖಾಮುಖಿ' ಸಂವಾದ

ಶೇಷಾದ್ರಿಪುರಂ

ಶೇಷಾದ್ರಿಪುಂ ಕಾಲೇಜು ಕನ್ನಡ ಸ್ನಾತಕೋತ್ತರ ಅಧ್ಯಯನ ಕೇಂದ್ರವು ಕನ್ನಡ ವಿಶ್ವವಿದ್ಯಾಲಯ ಮತ್ತು ಹಂಪಿಯ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗದ ಜಂಟಿ ಸಹಯೋಗದೊಂದಿಗೆ ಪಂಪನ 'ಆದಿಪುರಾಣ ಸಾಂಸ್ಕೃತಿಕ ಮುಖಾಮುಖಿ' ಸಂವಾದ ಕಾರ್ಯಕ್ರಮವನ್ನು ಇತ್ತೀಚೆಗೆ ಏರ್ಪಡಿಸಿತ್ತು.



ಸಾಹಿತಿ ಬರಗೂರು ರಾಮಚಂದ್ರಪ್ಪ ಹಾಗೂ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಪದಾಧಿಕಾರಿಗಳೊಂದಿಗೆ ಕಾಲೇಜಿನ ಪ್ರಾಂಶುಪಾಲರು ಹಾಗೂ ವಿಭಾಗದ ಸಂಯೋಜಕಿ.

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಮಾಜಿ ಅಧ್ಯಕ್ಷ ಹಾಗೂ ಸಾಹಿತಿ ಪ್ರೊ. ಬರಗೂರು ರಾಮಚಂದ್ರಪ್ಪ ಉದ್ಘಾಟಿಸಿದರು. ಇದೇ ಸಂದರ್ಭದಲ್ಲಿ ಹಿಂದಿನ ಸಾಂಸ್ಕೃತಿಕ ಮುಖಾಮುಖಿ ಸಂವಾದ ಕಾರ್ಯಕ್ರಮವನ್ನು ಆಧರಿಸಿ ಹೊರತಂದ 'ಕುಮಾರವ್ಯಾಸ ಭಾರತ' ಪುಸ್ತಕವನ್ನು ಬಿಡುಗಡೆ ಮಾಡಿದರು.

ನಂತರ ಮಾತನಾಡಿದ ಅವರು 10ನೇ ಶತಮಾನದ ಹಳಗನ್ನಡ ಕವಿಗಳು ಸಂಸ್ಕೃತ ಸಾಹಿತ್ಯದಿಂದ ವಸ್ತುವನ್ನು ಪಡೆದರೂ ತಮ್ಮ ಕಾಲದ, ಭಾಷೆಯ, ಅನುಭವದ ಸ್ವಂತಿಕೆಯನ್ನು ಕಾವ್ಯದಲ್ಲಿ ತರಲು ಸೃಜನಶೀಲ ಹೋರಾಟವನ್ನು ನಡೆಸಿದರು ಎಂದು ಅಭಿಪ್ರಾಯಪಟ್ಟರು. ಈ ಸಂದರ್ಭದಲ್ಲಿ ಕಾಲೇಜಿನ ಸ್ನಾತಕೋತ್ತರ ಕನ್ನಡ ಅಧ್ಯಯನ ಕೇಂದ್ರದಿಂದ ಅತಿ ಹೆಚ್ಚು ಅಂಕಗಳನ್ನು ಹಾಗೂ ಚಿನ್ನದ ಪದಕ ಪಡೆದ ವಿದ್ಯಾರ್ಥಿಗಳನ್ನು ಸನ್ಮಾನಿಸಲಾಯಿತು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ಕೆ.ಎಂ. ನಂಜಪ್ಪ ಸಂವಾದ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಡಬ್ಲ್ಯೂ.ಪಿ. ಕೃಷ್ಣ, ಕಾಲೇಜಿನ ಪ್ರಾಂಶುಪಾಲ ಡಾ.ಸಿ.ಎಲ್.ಎನ್. ಪ್ರಕಾಶ್, ಕನ್ನಡ ಸ್ನಾತಕೋತ್ತರ ಅಧ್ಯಯನ ಕೇಂದ್ರದ ಸಂಯೋಜಕಿ ಪ್ರೊ.ಬಿ. ಗೀತಾಕುಮಾರಿ ಮುಂತಾದವರು ಉದ್ಘಾಟನಾ ಕಾರ್ಯಕ್ರಮದಲ್ಲಿ ಹಾಜರಿದ್ದರು.

ಎರಡು ದಿನಗಳ ಕಾಲ ನಡೆದ ಸಂವಾದ ಕಾರ್ಯಕ್ರಮದಲ್ಲಿ ಡಾ|ಓ.ಎಲ್. ನಾಗಭೂಷಣ ಸ್ವಾಮಿ, ಡಾ|ನ್.ಎಸ್. ತಾರಾನಾಥ್, ಪ್ರೊ| ಚಂದ್ರಶೇಖರ್ ನಂಗಲಿ, ಸುಮಿತ್ರಾಬಾಯಿ, ಕೆ.ವೈ. ನಾರಾಯಣ ಸ್ವಾಮಿ ಮುಂತಾದವರು ತಮ್ಮ ಅಭಿಪ್ರಾಯಗಳನ್ನು ಮಂಡಿಸಿದರು.

# ಮುಖಾಮುಖಿ ಸಂವಾದ

ಬೆಂಗಳೂರು, ಫೆ.19- ಶೇಷಾದ್ರಿಪುರಂ ಕಾಲೇಜು ಕನ್ನಡ ಸ್ನಾತಕೋತ್ತರ ಅಧ್ಯಯನ ಕೇಂದ್ರ ಮತ್ತು ಹಂಪಿ ಕನ್ನಡ ವಿಶ್ವವಿದ್ಯಾಲಯದ ಆಶ್ರಯದಲ್ಲಿ ಪಂಪನ ಆದಿಪುರಾಣ ಸಾಂಸ್ಕೃತಿಕ ಮುಖಾಮುಖಿ ಸಂವಾದ ಕಾರ್ಯಕ್ರಮ ಇತ್ತೀಚೆಗೆ ನಡೆಯಿತು.

ಕಾರ್ಯಕ್ರಮ ಉದ್ಘಾಟಿಸಿದ ಸಾಹಿತಿ ಪ್ರೊ. ಬರಗೂರು ರಾಮಚಂದ್ರಪ್ಪ ಮಾತನಾಡಿ, 10ನೇ ಶತಮಾನದ ಹಳಗನ್ನಡ ಕವಿಗಳು ಸಾಹಿತ್ಯ ರಚನೆಗೆ ಸಂಸ್ಕೃತದಿಂದ ವಸ್ತುವನ್ನು ಪಡೆದಿದ್ದರು. ಆದರೆ ಕವಿಗಳು ಆ ಕಾಲದ ಭಾಷೆಯ ಅನುಭವದ ಸ್ವಂತಿಕೆಯನ್ನು ಕಾವ್ಯದಲ್ಲಿ ತರಲು ಸೃಜನಶೀಲ ಹೋರಾಟ ನಡೆಸಿದ್ದರು. ಅಂತಹ ಭಾಷೆಯ ಪ್ರಾಮುಖ್ಯತೆ ಬದಲಾದ ಇಂದಿನ ಕಾಲಕ್ಕೂ ಪ್ರಸ್ತುತವೆನಿಸಿದೆ ಎಂದು ಅಭಿಪ್ರಾಯಪಟ್ಟರು.

ಮುಖಾಮುಖಿ ಸಂವಾದ ಆಧರಿಸಿ ಹೊರತಂದ 'ಕುಮಾರವ್ಯಾಸ ಭಾರತ' ಪುಸ್ತಕವನ್ನು ಈ ಸಂದರ್ಭದಲ್ಲಿ ಅವರು ಬಿಡುಗಡೆಗೊಳಿಸಿದರು. ಜತೆಗೆ ಕಾಲೇಜಿನ ಕನ್ನಡ ಅಧ್ಯಯನ ಕೇಂದ್ರದಿಂದ ಅತಿಹೆಚ್ಚು ಅಂಕಗಳನ್ನು ಪಡೆದ ವಿದ್ಯಾರ್ಥಿಗಳನ್ನು ಸನ್ಮಾನಿಸಲಾಯಿತು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ಕೆ.ಎಂ. ನಂಜಪ್ಪ ಅಧ್ಯಕ್ಷತೆ ವಹಿಸಿದ್ದರು. ದತ್ತಿಯ ಪ್ರಧಾನ ಕಾರ್ಯದರ್ಶಿ ಡಬ್ಲ್ಯು. ಪಿ. ಕೃಷ್ಣ ಹಾಜರಿದ್ದರು. ಪ್ರಾಂಶುಪಾಲ ಡಾ. ಸಿ.ಎಲ್.ಎನ್. ಪ್ರಕಾಶ್ ಸ್ವಾಗತಿಸಿದರು. ಕನ್ನಡ ಸ್ನಾತಕೋತ್ತರ ಕನ್ನಡ ಅಧ್ಯಯನ ಕೇಂದ್ರದ ಸಂಯೋಜಕಿ ಪ್ರೊ. ಗೀತಾ ಕುಮಾರಿ ಕಾರ್ಯಕ್ರಮ ನಿರೂಪಿಸಿದರು.

ಎರಡು ದಿನಗಳ ಮುಖಾಮುಖಿಯಲ್ಲಿ ಸಾಹಿತಿಗಳಾದ ಡಾ. ಓ.ಎಲ್. ನಾಗ ಭೂಷಣ ಸ್ವಾಮಿ, ಡಾ. ಎನ್. ಎಸ್. ತಾರಾನಾಥ್, ಪ್ರೊ. ಚಂದ್ರಶೇಖರ್ ನಂಗಲಿ, ಸುಮಿತ್ರಾಬಾಯಿ, ನಾರಾಯಣಸ್ವಾಮಿ, ರಾಮಲಿಂಗಪ್ಪ ಟಿ. ಬೇಗೂರು, ಡಾ. ಬಸವರಾಜು ಕಲ್ಗುಡಿ, ಡಾ. ಎಚ್.ಎಸ್. ರಾಘವೇಂದ್ರ ರಾವ್, ಪ್ರೊ. ಎನ್. ಬೈರೇಗೌಡ, ಡಾ. ಅಂಗಡಿ, ಪ್ರೊ. ಕಾ.ವೆಂ. ರಾಜಗೋಪಾಲ್, ಪ್ರೊ. ಶಿವರಾಮಯ್ಯ ಭಾಗವಹಿಸಿದ್ದರು.

20-2-2004




*ಬೆಂಗಳೂರಿನಲ್ಲಿ ಶೇಷಾದ್ರಿಪುರಂ ಕಾಲೇಜು ಎರಡು ದಿನಗಳ ಕಾಲ ಏರ್ಪಡಿಸಿದ್ದ 'ಆದಿಪುರಾಣ ಸಾಂಸ್ಕೃತಿಕ ಮುಖಾಮುಖಿ' ಎಂಬ ಸಂವಾಗ ಕಾರ್ಯಕ್ರಮದಲ್ಲಿ ಸಾಹಿತಿ ಬರಗೂರು ರಾಮಚಂದ್ರಪ್ಪ, ಡಾ. ಸಿ.ಎಲ್.ಎನ್. ಪ್ರಕಾಶ್, ಶೇಷಾದ್ರಿಪುರ ಶಿಕ್ಷಣ ದತ್ತಿಯ ಪದಾಧಿಕಾರಿಗಳು ಪಾಲ್ಗೊಂಡಿದ್ದರು.*

# ಆದಿಪುರಾಣ: ಸಾಂಸ್ಕೃತಿಕ ಮುಖಾಮುಖಿ ಸಂವಾದ

ಬೆಂಗಳೂರು, ಫೆ. 19- ಶೇಷಾದ್ರಿಪುರಂ ಕಾಲೇಜು ಕನ್ನಡ ಸ್ನಾತಕೋತ್ತರ ಅಧ್ಯಯನ ಕೇಂದ್ರ ಮತ್ತು ಕನ್ನಡ ವಿಶ್ವವಿದ್ಯಾಲಯ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ, ಹಂಪಿ ಇವರ ಸಹಭಾಗಿತ್ವದಲ್ಲಿ ಪಂಪನ ಆದಿಪುರಾಣ ಸಾಂಸ್ಕೃತಿಕ ಮುಖಾಮುಖಿ ಸಂವಾದ ಕಾರ್ಯಕ್ರಮವನ್ನು ಫೆಬ್ರವರಿ 14 ಮತ್ತು 15 ರಂದು ಶೇಷಾದ್ರಿಪುರಂ ಕಾಲೇಜಿನಲ್ಲಿ ಏರ್ಪಡಿಸಲಾಗಿತ್ತು.

ಈ ಕಾರ್ಯಕ್ರಮವನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಮಾಜಿ ಅಧ್ಯಕ್ಷರು ಮತ್ತು ಖ್ಯಾತ ಸಾಹಿತಿಗಳೂ ಆದ ಪ್ರೊ. ಬರಗೂರು ರಾಮಚಂದ್ರಪ್ಪ ಅವರು ಉದ್ಘಾಟಿಸಿದರು. ಇದೇ ಸಂದರ್ಭದಲ್ಲಿ ಹಿಂದಿನ ಸಾಂಸ್ಕೃತಿಕ ಮುಖಾಮುಖಿ ಸಂವಾದ ಕಾರ್ಯಕ್ರಮವನ್ನು ಆಧರಿಸಿ ಹೊರತಂದ ಕುಮಾರವ್ಯಾಸ ಭಾರತ ಪುಸ್ತಕವನ್ನು ಬಿಡುಗಡೆ ಮಾಡಿದರು. ನಂತರ ಮಾತನಾಡಿದ ಅವರು 10ನೇ ಶತಮಾನದ ಹಳಗನ್ನಡ ಕವಿಗಳು ಸಂಸ್ಕೃತ ಸಾಹಿತ್ಯದಿಂದ ವಸ್ತುವನ್ನು ಪಡೆದರೂ ತಮ್ಮ ಕಾಲದ ಭಾಷೆಯ ಅನುಭವದ ಸ್ವಂತಿಕೆಯನ್ನು ಕಾವ್ಯದಲ್ಲಿ ತರಲು ಸೃಜನಶೀಲ ಹೋರಾಟವನ್ನು ನಡೆಸಿದರು ಎಂದು ಹೇಳಿ ಬದಲಾದ ಇಂದಿನ ಕಾಲಕ್ಕೂ ಇವು ಪ್ರಸ್ತುತ ಎಂದು ಅಭಿಪ್ರಾಯಪಟ್ಟ ಅವರು ಇಂತಹ ಸಂವಾದ ಕಾರ್ಯಕ್ರಮಗಳು ಹೆಚ್ಚು ನಡೆಯಬೇಕೆಂದು ಆಶಿಸಿದರು.

ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷರಾದ ಕೆ.ಎಂ. ನಂಜಪ್ಪ ಅವರು ವಹಿಸಿದ್ದರು.

ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿಯವರಾದ ಡಬ್ಲ್ಯೂ.ಪಿ. ಕೃಷ್ಣ ಅವರು ಉಪಸ್ಥಿತರಿದ್ದರು. ಕಾಲೇಜಿನ ಪ್ರಾಂಶುಪಾಲರಾದ ಡಾ. ಸಿ.ಎಲ್.ಎನ್. ಪ್ರಕಾಶ್ ಅವರು ಗಣ್ಯರನ್ನು, ಸಭಿಕರನ್ನು ಸ್ವಾಗತಿಸಿದರು. ಕನ್ನಡ ಸ್ನಾತಕೋತ್ತರ ಅಧ್ಯಯನ ಕೇಂದ್ರದ ಸಂಯೋಜಕಿ ಪ್ರೊ. ಬಿ. ಗೀತಾಕುಮಾರಿ ಅವರು ಕಾರ್ಯಕ್ರಮವನ್ನು ನಿರೂಪಿಸಿಕೊಟ್ಟರು.

ಉದ್ಘಾಟನೆಯ ನಂತರ ಮುಂದುವರೆದ ಎರಡು ದಿನಗಳ ಆದಿಪುರಾಣ, ಸಾಂಸ್ಕೃತಿಕ ಮುಖಾಮುಖಿ ಸಂವಾದ ಕಾರ್ಯಕ್ರಮದಲ್ಲಿ ಸಾಹಿತ್ಯ ವಲಯದಲ್ಲಿ ಗಣ್ಯರುಗಳಾದ ಡಾ. ಓ.ಎಲ್. ನಾಗಭೂಷಣ ಸ್ವಾಮಿ, ಡಾ. ಎನ್.ಎಸ್. ತಾರಾನಾಥ್, ಪ್ರೊ. ಚಂದ್ರಶೇಖರ್ ನಂಗಲಿ, ಸುಮಿತ್ರಾಬಾಯಿ, ನಾರಾಯಣಸ್ವಾಮಿ ಕೆ.ವೈ. ರಾಮಲಿಂಗಪ್ಪ ಟಿ. ಬೇಗೂರು, ಡಾ. ಬಸವರಾಜು ಕಲ್ಗುಡಿ, ಡಾ. ಎಚ್.ಎಸ್. ರಾಘವೇಂದ್ರರಾವ್, ಪ್ರೊ. ಎನ್. ಬೈರೇಗೌಡ, ಡಾ. ಅಂಗಡಿ, ಪ್ರೊ. ಕಾ.ವೆಂ. ರಾಜಗೋಪಾಲ್, ಪ್ರೊ. ಶಿವರಾಮಯ್ಯ, ಡಾ. ಎಚ್.ಎಲ್. ಪುಷ್ಪ, ಪ್ರೊ. ಪುಟ್ಟಯ್ಯ, ಡಾ. ಅಮರೇಶ್ ನುಗಡೋಣಿ ಮೊದಲಾದವರು ಭಾಗವಹಿಸಿ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದರು.

ಸುಮಾರು 200ಕ್ಕೂ ಮಿಗಿಲಾದ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು, ಸಾಹಿತ್ಯಾಭಿಮಾನಿಗಳು ನಗರದ ವಿವಿಧೆಡೆಗಳಿಂದ ಆಗಮಿಸಿ ಭಾಗವಹಿಸಿದ್ದ ಕನ್ನಡ ಸಾಹಿತ್ಯದ ಅಧ್ಯಯನದಲ್ಲಿ ಇಂದಿಗೂ ಉಳಿದಿರುವ ಆಸಕ್ತಿಯನ್ನು ಪ್ರತಿಬಿಂಬಿಸಿತ್ತು ಎಂದು ಸಂಘಟಕರು ಅಭಿಪ್ರಾಯಪಟ್ಟರು. ಇದೇ ಸಂದರ್ಭದಲ್ಲಿ ಕಾಲೇಜಿನ ಸ್ನಾತಕೋತ್ತರ ಕನ್ನಡ ಅಧ್ಯಯನ ಕೇಂದ್ರದಿಂದ ಅತಿ ಹೆಚ್ಚು ಅಂಕಗಳನ್ನು ಹಾಗೂ ವಿಶ್ವವಿದ್ಯಾಲಯದ ಚಿನ್ನದ ಪದಕ ಪಡೆದ ವಿದ್ಯಾರ್ಥಿಗಳನ್ನು ಸನ್ಮಾನಿಸಲಾಯಿತು.

ಸಂಯುಕ್ತ ಕರ್ನಾಟಕ, ಬೆಂಗಳೂರು 20-2-2004



ಬೆಂಗಳೂರಿನಲ್ಲಿ ಶೇಷಾದ್ರಿಪುರಂ ಕಾಲೇಜು ಎರಡು ದಿನಗಳ ಕಾಲ ಏರ್ಪಡಿಸಿದ್ದ 'ಆದಿಪುರಾಣ ಸಾಂಸ್ಕೃತಿಕ ಮುಖಾಮುಖಿ' ಎಂಬ ಸಂವಾದ ಕಾರ್ಯಕ್ರಮದಲ್ಲಿ ಸಾಹಿತಿ ಬರಗೂರು ರಾಮಚಂದ್ರಪ್ಪ, ಡಾ. ಸಿ.ಎಲ್.ಎನ್. ಪ್ರಕಾಶ್, ಶೇಷಾದ್ರಿಪುರ ಶಿಕ್ಷಣ ದತ್ತಿಯ ಪದಾಧಿಕಾರಿಗಳು ಪಾಲ್ಗೊಂಡಿದ್ದರು.

# ಆದಿಪುರಾಣ: ಸಾಂಸ್ಕೃತಿಕ ಮುಖಾಮುಖಿ ಸಂವಾದ

ಬೆಂಗಳೂರು, ಫೆ. 19- ಶೇಷಾದ್ರಿಪುರಂ ಕಾಲೇಜು ಕನ್ನಡ ಸ್ನಾತಕೋತ್ತರ ಅಧ್ಯಯನ ಕೇಂದ್ರ ಮತ್ತು ಕನ್ನಡ ವಿಶ್ವವಿದ್ಯಾಲಯ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ, ಹಂಪಿ ಇವರ ಸಹಭಾಗಿತ್ವದಲ್ಲಿ ಪಂಪನ ಆದಿಪುರಾಣ ಸಾಂಸ್ಕೃತಿಕ ಮುಖಾಮುಖಿ ಸಂವಾದ ಕಾರ್ಯಕ್ರಮವನ್ನು ಫೆಬ್ರವರಿ 14 ಮತ್ತು 15 ರಂದು ಶೇಷಾದ್ರಿಪುರಂ ಕಾಲೇಜಿನಲ್ಲಿ ಏರ್ಪಡಿಸ ತ್ತು.

ಈ ಕಾರ್ಯಕ್ರಮವನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಮಾಜಿ ಅಧ್ಯಕ್ಷರು ಮತ್ತು ಖ್ಯಾತ ಸಾಹಿತಿಗಳೂ ಆದ ಪ್ರೊ. ಬರಗೂರು ರಾಮಚಂದ್ರಪ್ಪ ಅವರು ಉದ್ಘಾಟಿಸಿದರು. ಇದೇ ಸಂದರ್ಭದಲ್ಲಿ ಹಿಂದಿನ ಸಾಂಸ್ಕೃತಿಕ ಮುಖಾಮುಖಿ ಸಂವಾದ ಕಾರ್ಯಕ್ರಮವನ್ನು ಆಧರಿಸಿ ಹೊರತಂದ ಕುಮಾರವ್ಯಾಸ ಭಾರತ ಪುಸ್ತಕವನ್ನು ಬಿಡುಗಡೆ ಮಾಡಿದರು. ನಂತರ ಮಾತನಾಡಿದ ಅವರು 10ನೇ ಶತಮಾನದ ಹಳಗನ್ನಡ ಕವಿಗಳು ಸಂಸ್ಕೃತ ಸಾಹಿತ್ಯದಿಂದ ವಸ್ತುವನ್ನು ಪಡೆದರೂ ತಮ್ಮ ಕಾಲದ ಭಾಷೆಯ ಅನುಭವದ ಸ್ವಂತಿಕೆಯನ್ನು ಕಾವ್ಯದಲ್ಲಿ ತರಲು ಸೃಜನಶೀಲ ಹೋರಾಟವನ್ನು ನಡೆಸಿದರು ಎಂದು ಹೇಳಿ ಬದಲಾದ ಇಂದಿನ ಕಾಲಕ್ಕೂ ಇವು ಪ್ರಸ್ತುತ ಎಂದು ಅಭಿಪ್ರಾಯಪಟ್ಟ ಅವರು ಇಂತಹ ಸಂವಾದ ಕಾರ್ಯಕ್ರಮಗಳು ಹೆಚ್ಚು ನಡೆಯಬೇಕೆಂದು ಆಶಿಸಿದರು.

ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷರಾದ ಕೆ.ಎಂ. ನಂಜಪ್ಪ ಅವರು ವಹಿಸಿದ್ದರು.

ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿಯವರಾದ ಡಬ್ಲ್ಯೂ.ಪಿ. ಕೃಷ್ಣ ಅವರು ಉಪಸ್ಥಿತರಿದ್ದರು. ಕಾಲೇಜಿನ ಪ್ರಾಂಶುಪಾಲರಾದ ಡಾ. ಸಿ.ಎಲ್.ಎನ್. ಪ್ರಕಾಶ್ ಅವರು ಗಣ್ಯರನ್ನು, ಸಭಿಕರನ್ನು ಸ್ವಾಗತಿಸಿದರು. ಕನ್ನಡ ಸ್ನಾತಕೋತ್ತರ ಅಧ್ಯಯನ ಕೇಂದ್ರದ ಸಂಯೋಜಕಿ ಪ್ರೊ. ಬಿ. ಗೀತಾಕುಮಾರಿ ಅವರು ಕಾರ್ಯಕ್ರಮವನ್ನು ನಿರೂಪಿಸಿಕೊಟ್ಟರು.

ಉದ್ಘಾಟನೆಯ ನಂತರ ಮುಂದುವರೆದ ಎರಡು ದಿನಗಳ ಆದಿಪುರಾಣ, ಸಾಂಸ್ಕೃತಿಕ ಮುಖಾಮುಖಿ ಸಂವಾದ ಕಾರ್ಯಕ್ರಮದಲ್ಲಿ ಸಾಹಿತ್ಯ ವಲಯದಲ್ಲಿ ಗಣ್ಯರುಗಳಾದ ಡಾ. ಓ.ಎಲ್. ನಾಗಭೂಷಣಸ್ವಾಮಿ, ಡಾ. ಎನ್.ಎಸ್. ತಾರಾನಾಥ್, ಪ್ರೊ. ಚಂದ್ರಶೇಖರ್ ನಂಗಲಿ, ಸುಮಿತ್ರಾಬಾಯಿ, ನಾರಾಯಣಸ್ವಾಮಿ ಕೆ.ವೈ. ರಾಮಲಿಂಗಪ್ಪ ಟಿ. ಬೇಗೂರು, ಡಾ. ಬಸವರಾಜು ಕಲ್ಗುಡಿ, ಡಾ. ಎಚ್.ಎಸ್. ರಾಘವೇಂದ್ರರಾವ್, ಪ್ರೊ. ಎನ್. ಭೈರೇಗೌಡ, ಡಾ. ಅಂಗಡಿ, ಪ್ರೊ. ಕಾ.ವೆಂ. ರಾಜಗೋಪಾಲ್, ಪ್ರೊ. ಶಿವರಾಮಯ್ಯ, ಡಾ. ಎಚ್.ಎಲ್. ಪುಷ್ಪ, ಪ್ರೊ. ಪುಟ್ಟಯ್ಯ, ಡಾ. ಅಮರೇಶ್ ನುಗಡೋಣಿ ಮೊದಲಾದವರು ಭಾಗವಹಿಸಿ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದರು.

ಸುಮಾರು 200ಕ್ಕೂ ಮಿಗಿಲಾ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು, ಸಾಹಿತ್ಯಾಭಿಮಾನಿಗಳು ನಗರದ ವಿವಿಧೆಗಳಿಂದ ಆಗಮಿಸಿ ಭಾಗವಹಿಸಿ ಕನ್ನಡ ಸಾಹಿತ್ಯದ ಅಧ್ಯಯನದ ಇಂದಿಗೂ ಉಳಿದಿರುವ ಆಸಕ್ತಿಯನ್ನ ಪ್ರತಿಬಿಂಬಿಸಿತ್ತು ಎಂದು ಸಂಘಟಕರ ಅಭಿಪ್ರಾಯಪಟ್ಟರು. ಇದೇ ಸಂದರ್ಭದಲ್ಲಿ ಕಾಲೇಜಿನ ಸ್ನಾತಕೋತ್ತರ ಕನ್ನಡ ಅಧ್ಯಯನ ಕೇಂದ್ರದಿಂದ ಅತಿ ಹೆಚ್ಚು ಅಂಕಗಳನ್ನು ಹಾಗೂ ವಿಶ್ವವಿದ್ಯಾಲಯದ ಚಿನ್ನದ ಪದಕ ಪಡೆದ ವಿದ್ಯಾರ್ಥಿಗಳನ್ನು ಸನ್ಮಾನಿಸಲಾಯಿತು.

ಉದಯವಾಣಿ ಫೆಬ್ರುವರಿ 19, 2004

# ಕೆ.ಎಂ. ನಂಜಪ್ಪನವರ ಜನ್ಮದಿನೋತ್ಸವ



ಶೇಷಾದ್ರಿಪುರಂ

ನಗರದ ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆಯ ಅಧ್ಯಕ್ಷ ಹಾಗೂ ಮಾಜಿ ಮಹಾಪೌರರಾದ ಕೆ.ಎಂ. ನಂಜಪ್ಪನವರ ಜನ್ಮದಿನೋತ್ಸವವನ್ನು ಇತ್ತೀಚೆಗೆ ಆಚರಿಸಲಾಯಿತು.

ಕಾರ್ಯಕ್ರಮದ ಮುಖ್ಯ ಅತಿಥಿ ಶೇಷಾದ್ರಿ ಪುರಂ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ಡಬ್ಲ್ಯೂ.ಪಿ. ಕೃಷ್ಣ ಮಾತನಾಡಿ, ಕೆ.ಎಂ. ನಂಜಪ್ಪ ಚಿಕ್ಕ ವಯಸ್ಸಿನಿಂದಲೂ ಮಹಾನ್ ವ್ಯಕ್ತಿಗಳನ್ನು ಆದರ್ಶವಾಗಿಟ್ಟುಕೊಂಡು ಪ್ರೀತಿ, ಕರುಣೆ, ವಿನಯ, ನಮ್ರತೆ, ಸಹನೆ, ಪ್ರಾಮಾಣಿಕತೆ ಮೊದಲಾದ ಶಿಷ್ಟ ಶಕ್ತಿಗಳನ್ನು ತಮ್ಮ ನಡವಳಿಕೆಯಲ್ಲಿ ಅಳವಡಿಸಿಕೊಂಡು ನೈತಿಕ ಶಕ್ತಿಯಾಗಿ ವಿಜೃಂಭಿಸಿದ್ದಾರೆ ಎಂದು ಹೇಳಿದರು.

ಚಿತ್ರದುರ್ಗದ ಮುರುಘ ರಾಜೇಂದ್ರ ಬೃಹನ್ ಮಠದ ಶ್ರೀ ಶಿವರಾತ್ರಿ ಮುರುಘರಾಜೇಂದ್ರ ಶರಣರು ಮಾತನಾಡಿ ಸಂಪೂರ್ಣ ಸಮರ್ಪಣಾ ಭಾವದಿಂದಿರುವ ವ್ಯಕ್ತಿ ಮಾತ್ರ ಸಮಾಜದಲ್ಲಿ ಉನ್ನತ ಮಟ್ಟಕ್ಕೇರುತ್ತಾನೆ. ಬಾಳೆ ಫಲಭರಿತವಾದಾಗ ಬಾಗುತ್ತದೆಯೇ ಹೊರತು ಬೀಗುವುದಿಲ್ಲ. ಹಾಗೆಯೇ ಮನುಷ್ಯ ತನ್ನ ಸತ್ಕಾರ್ಯ ಮತ್ತು ಸರಳತೆಯಿಂದ ಬಾಗಲು ಪ್ರಯತ್ನಿಸಬೇಕು ಎಂದು ತಿಳಿಸಿದರು.

ಕೆಲವರು ಆನಂದದ ಬೆಳಕನ್ನು ಹೊರಗಡೆ ಹುಡುಕುತ್ತಿರುತ್ತಾರೆ. ಆದರೆ ಅದು ನಮ್ಮಲ್ಲಿಯೇ ಇದೆ. ನಮ್ಮ ಮೆದುಳು ಕೇವಲ ನರಮಂಡಲ ಮಾತ್ರವಲ್ಲ. ಅಲ್ಲಿ ಕೋಟಿ ಸೂರ್ಯರ ಪ್ರಕಾಶವಿದೆ. ನಮಗೆ ಅದರ ಅರವಾಗಲಿಲ್ಲವೆಂದರೆ ಅದರ ಆಳಕ್ಕೆ ಹೋಗಿಲ್ಲವೆಂದು ಅರ್ಥ ಎಂದು ವಿವರಿಸಿದರು. ಸಮಾರಂಭದಲ್ಲಿ ಸಂಸ್ಥೆಯ ಉಪಾಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಡಬ್ಲ್ಯೂ. ಎಚ್. ಅನಿಲ್‌ಕುಮಾರ್, ಸಹಕಾರ್ಯದರ್ಶಿ ಆರ್. ಕೃಷ್ಣ ಮುಂತಾದವರು ಹಾಜರಿದ್ದರು.



ಬೆಂಗಳೂರಿನಲ್ಲಿ ಶನಿವಾರ ನಡೆದ ಪಂಪನ 'ಆದಿ ಪುರಾಣ: ಸಾಂಸ್ಕೃತಿಕ ಮುಖಾಮುಖಿ- ಸಂವಾದ' ಕಾರ್ಯಕ್ರಮದಲ್ಲಿ ಶೇಷಾದ್ರಿಪುರ ಪದವಿ ಕಾಲೇಜಿನ ಪ್ರಾಂಶುಪಾಲ ಸಿ.ಎಲ್.ಎನ್. ಪ್ರಕಾಶ್, ಲೇಖಕ ಬರಗೂರು ರಾಮಚಂದ್ರಪ್ಪ, ಶೇಷಾದ್ರಿಪುರ ಶಿಕ್ಷಣ ದತ್ತಿಯ ಅಧ್ಯಕ್ಷ ಪ್ರೊ. ಕೆ.ಎಂ.ನಂಜಪ್ಪ ಭಾಗವಹಿಸಿದ್ದರು.

# 'ಹಳೆಗನ್ನಡ ಕವಿಗಳಿಂದ ಸೃಜನಶೀಲ ಸ್ವಾತಂತ್ರ್ಯ ಹೋರಾಟ'

ಬೆಂಗಳೂರು, ಫೆ. 14- 'ಹಳೆಗನ್ನಡ ಕವಿಗಳು ಸಂಸ್ಕೃತ ಸಾಹಿತ್ಯದಿಂದ ವಸ್ತು ಪಡೆದರೂ ತನ್ನ ಕಾಲದ- ಭಾಷೆಯ- ಅನುಭವದ ಸ್ವಂತಿಕೆಯನ್ನು ಕಾವ್ಯದಲ್ಲಿ ತುಂಬುವುದಕ್ಕಾಗಿ 'ಸೃಜನಶೀಲ ಸ್ವಾತಂತ್ರ್ಯ ಹೋರಾಟ' ನಡೆಸಿದರು ಎಂದು ಲೇಖಕ ಬರಗೂರು ರಾಮಚಂದ್ರಪ್ಪ ಇಂದು ಇಲ್ಲಿ ಹೇಳಿದರು.

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ ಮತ್ತು ಶೇಷಾದ್ರಿಪುರ ಪದವಿ ಕಾಲೇಜಿನ ಸ್ನಾತಕೋತ್ತರ ಕೇಂದ್ರಗಳು ಏರ್ಪಡಿಸಿದ್ದ ಪಂಪನ 'ಆದಿ ಪುರಾಣ: ಸಾಂಸ್ಕೃತಿಕ ಮುಖಾಮುಖಿ- ಸಂವಾದ' ಕಾರ್ಯಕ್ರಮವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ಕನ್ನಡದ್ದೇ ಆದ ಸಾಂಸ್ಕೃತಿಕ ಆಕೃತಿಯನ್ನು ಸಾಹಿತ್ಯದಲ್ಲಿ ಅಗು ಮಾಡುವುದಕ್ಕಾಗಿ ಸಂಸ್ಕೃತ ಕೃತಿಯೊಂದಿಗೆ ನಡೆಸಿದ ಮುಖಾಮುಖಿ, ಸೃಜನಶೀಲ ಸ್ವಾತಂತ್ರ್ಯದ ಹಂಬಲದಿಂದ ಬಂದದ್ದು ಎಂದು ಅವರು ವಿಶ್ಲೇಷಿಸಿದರು.

ಕೆಲವು ಕೃತಿಗಳು ಮಾತ್ರ ಸಮಕಾಲೀನವಾಗಿ ಪ್ರಸ್ತುತವಾಗುವ ಸಾಮರ್ಥ್ಯ ಪಡೆದಿರುತ್ತವೆ. ಕೃತಿ ರಚನೆಯಾದ ಮತ್ತು ಓದುತ್ತಿರುವ ಎರಡು ಕಾಲ ಘಟ್ಟಗಳ ಮುಖಾಮುಖಿ- ಅನುಸಂಧಾನದಿಂದ ಕೃತಿಯ ಧ್ವನ್ಯಾರ್ಥ ನವೀಕರಣವಾಗುತ್ತಿರುತ್ತದೆ ಎಂದು ಅವರು ಹೇಳಿದರು.

ಕಾವ್ಯಕ್ಕಿರುವ ಅರ್ಥದ ಸಾಧ್ಯತೆಗಳು ಗೊತ್ತಿಲ್ಲದ ಕಾಲದಲ್ಲಿ ನಿಘಂಟುವಿನಿಂದ ಪ್ರಾಚೀನ ಕನ್ನಡ ಕಾವ್ಯದ ಅರ್ಥ ಪಡೆಯಲು ಸಾಧ್ಯ ಎಂದು ಭಾವಿಸಿರುವವರಿಂದ ಕಾವ್ಯದ ಓದಿಗೆ ಅಪಚಾರವಾಯಿತು ಎಂದು ಅವರು ಎಚ್ಚರಿಸಿದರು.

ರಹಮತ್ ತರೀಕೆರೆ ಸಂಪಾದಿಸಿರುವ 'ಕುಮಾರವ್ಯಾಸ ಭಾರತ: ಸಾಂಸ್ಕೃತಿಕ ಮುಖಾಮುಖಿ' ಪುಸ್ತಕವನ್ನು ಅವರು ಬಿಡುಗಡೆ ಮಾಡಿದರು.

ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಗಳ ಗೌರವ ಕಾರ್ಯದರ್ಶಿ ಡಬ್ಲ್ಯು.ಪಿ.ಕೃಷ್ಣ ಅತಿಥಿಗಳಾಗಿ ಭಾಗವಹಿಸಿದ್ದರು. ಶೇಷಾದ್ರಿಪುರ ಶಿಕ್ಷಣ ದತ್ತಿ ಅಧ್ಯಕ್ಷ ಪ್ರೊ. ಕೆ.ಎಂ.ನಂಜಪ್ಪ ಅಧ್ಯಕ್ಷತೆ ವಹಿಸಿದ್ದರು. ಕನ್ನಡ ಸಾಹಿತ್ಯ ಅಧ್ಯಯನ ವಿಭಾಗದ ಮುಖ್ಯಸ್ಥ ಅಮರೇಶ ನುಗಡೋಣಿ ಪ್ರಾಸ್ತಾವಿಕವಾಗಿ ಮಾತನಾಡಿದರು. ಶೇಷಾದ್ರಿಪುರ ಕಾಲೇಜಿನ ಪ್ರಾಂಶುಪಾಲ ಡಾ. ಸಿ. ಎಲ್. ಎನ್. ಪ್ರಕಾಶ್ ಸ್ವಾಗತಿಸಿದರು.

# ಶೇಷಾದ್ರಿಪುರಂ ಕಾಲೇಜು, ಪ್ರೌಢಶಾಲೆಯ ವಾರ್ಷಿಕೋತ್ಸವ




ಯಲಹಂಕ ಉಪನಗರದ ಶೇಷಾದ್ರಿಪುರಂ ಜೂನಿಯರ್ ಕಾಲೇಜು ಮತ್ತು ಪ್ರೌಢಶಾಲೆಯ ವಾರ್ಷಿಕೋತ್ಸವವನ್ನು ಇತ್ತೀಚೆಗೆ ಆಚರಿಸಲಾಯಿತು.

ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಪಾಲ್ಗೊಂಡಿದ್ದ ಇಂಟರ್ ನ್ಯಾಷನಲ್ ಅಕಾಡೆಮಿಯ ಸಂಶೋಧನೆ ಮತ್ತು ಸಮಾಜ ವಿಜ್ಞಾನ ವಿಭಾಗದ ಮುಖ್ಯಸ್ಥರಾದ ಡಾ। ಸಂದೀಪ್ ಶಾಸ್ತ್ರಿಯವರು ಮಾತನಾಡಿ, ಪ್ರತಿಯೊಬ್ಬ ವಿದ್ಯಾರ್ಥಿಯಲ್ಲೂ ಅಪೂರ್ವ ಜ್ಞಾನವನ್ನು ಪಡೆಯಬಲ್ಲ ಅಪಾರ ಶಕ್ತಿ ಅಡಗಿದೆ. ವಿದ್ಯಾರ್ಥಿ ಜೀವನದ ವಿವಿಧ ಹಂತಗಳಲ್ಲಿ ಚಿಕ್ಕಂದಿನಲ್ಲೇ ಸೃಜನಶೀಲತೆ ಸಹಜವಾಗಿರುತ್ತದೆ. ಅವರು ಪ್ರತಿಯೊಂದು ವಿಷಯದಲ್ಲೂ ಆಸಕ್ತಿ ತೋರಿಸುತ್ತಾರೆ. ಅವರು ಕೇಳುವ ಪ್ರಶ್ನೆಗಳಿಗೆ ಶಿಕ್ಷಕರು ತಾಳ್ಮೆಯಿಂದ ಉತ್ತರಿಸಿ ಸೃಜನಾತ್ಮಕತೆ ಬೆಳೆಯಲು ಅವಕಾಶ ಮಾಡಿಕೊಡಬೇಕು ಎಂದು ಸಮಾಜದಲ್ಲಿ ವಿವಿಧ ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸಿದ ವ್ಯಕ್ತಿಗಳ ಉದಾಹರಣೆಯೊಂದಿಗೆ ಗುರು ಶಿಷ್ಯರ ಪವಿತ್ರ ಸಂಬಂಧವನ್ನು ವಿವರಿಸಿದರು. ಎರಡು ವರ್ಷಗಳ ಅವಧಿ ಬಹಳ ಮುಖ್ಯವಾದದ್ದು. ವಿದ್ಯಾರ್ಥಿಗಳು ಈ ಹಂತದಲ್ಲಿ ಸಮಯವನ್ನು ಸರಿಯಾಗಿ ವಿನಿಯೋಗಿಸಿಕೊಂಡು ಗುರಿ ತಲುಪಿ ಸಮಾಜದಲ್ಲಿ ಶ್ರೇಷ್ಠರೆನಿಸಿಕೊಳ್ಳಬೇಕು ಎಂದೂ ಅವರು ಸಲಹೆ ನೀಡಿದರು.

ಅತಿಥಿಗಳಾಗಿ ಶಿಕ್ಷಣದತ್ತಿಯ ಅಧ್ಯಕ್ಷರಾದ ಕೆ.ಎಂ. ನಂಜಪ್ಪ, ಪ್ರಧಾನ ಕಾರ್ಯದರ್ಶಿಗಳಾದ ಡಬ್ಲ್ಯು. ಪಿ. ಕೃಷ್ಣ ಗೌರ್ನಿಂಗ್ ಕೌನ್ಸಿಲ್ ಛೇರ್‌ಮನ್ ವೀರಭದ್ರಯ್ಯ, ಸರೋಜ ನಂಜಪ್ಪ ಧರ್ಮದರ್ಶಿ ಶ್ರೀನಿವಾಸನ್ ಮತ್ತು ಕಾಲೇಜಿನ ಪ್ರಾಂಶುಪಾಲರಾದ ಜಯಶ್ರೀ ಸಿಂಗ್ ಉಪಸ್ಥಿತರಿದ್ದರು. ವಿವಿಧ ಚಟುವಟಿಕೆಗಳಲ್ಲಿ ಗೆದ್ದ ವಿದ್ಯಾರ್ಥಿಗಳಿಗೆ ಪ್ರಶಸ್ತಿಗಳನ್ನು ವಿತರಿಸಲಾಯಿತು. ವಿದ್ಯಾರ್ಥಿಗಳು ವಿವಿಧ ಮನೋರಂಜನಾ ಕಾರ್ಯಕ್ರಮಗಳಿಂದ ನೆರೆದಿದ್ದ ಪ್ರೇಕ್ಷಕರನ್ನು ರಂಜಿಸಿದರು.

ಮಾರನೇ ದಿನ ಇದೇ ವೇದಿಕೆಯಲ್ಲಿ ಶೇಷಾದ್ರಿಪುರಂ ಪ್ರೌಢಶಾಲೆಯ ವಾರ್ಷಿಕೋತ್ಸವವು ಜರುಗಿತು. ಸಮಾರಂಭದ ಮುಖ್ಯ ಅತಿಥಿಯಾಗಿದ್ದ ಆದರ್ಶ ಶಿಕ್ಷಣ ಸಂಸ್ಥೆಯ ಮುಖ್ಯಸ್ಥರಾದ ರಾಮಸ್ವಾಮಿಯವರು ವಿದ್ಯಾರ್ಥಿಗಳಿಗೆ ಬಹುಮಾನ ವಿತರಿಸಿ ಮಾತನಾಡಿ, ಮಕ್ಕಳು ವಿದ್ಯೆ ಕಲಿಕೆಯಲ್ಲಿ ಆಸಕ್ತಿ ತೋರಿಸಲು ಪ್ರಶಂಸೆಯ ಮಾತುಗಳು ಬಹುಮುಖ್ಯ. ಅವರ ಪ್ರಗತಿಯನ್ನು ಪಾಲಕರು ಗುರುತಿಸಬೇಕು. ತಂದೆ ತಾಯಿ ಮತ್ತು ಮಕ್ಕಳ ನಿಕಟ ಸಂಬಂಧವೇ ಇಲ್ಲದ ವಿದೇಶಿ ಸಂಸ್ಕೃತಿಯನ್ನು ಅನುಸರಿಸುತ್ತಿರುವ ಇಂದಿನ ಭಾರತೀಯರ ಯಾಂತ್ರಿಕ ಜೀವನದಲ್ಲಿ ಪಾಲಕರು ಒಂದಿಷ್ಟು ಸಮಯವನ್ನು ಮಕ್ಕಳೊಡನೆ ಕಳೆಯಲು ಅನುವು ಮಾಡಿಕೊಳ್ಳಬೇಕು. ಮಕ್ಕಳ ಹೂವಿನಂಥ ಮನಸ್ಸಿನ ಮೇಲೆ ಅನಗತ್ಯ ಒತ್ತಡ ಹೇರದೆ ಅವರ ಎಳೆ ಮನಸ್ಸಿನ ಭಾವನೆಗಳಿಗೆ ಗಮನವಿಟ್ಟು ಓದಿನ ಜೊತೆಗೆ ಇನ್ನಿತರ ಚಟುವಟಿಕೆಗಳಿಗೂ ಮಹತ್ವ ನೀಡಬೇಕು. ಒಂದು ಮಗು ಕೀರ್ತಿ ಗಳಿಸಿದಾಗ ಒಳ್ಳೆಯ ಹೆಸರು ಅವನಿಗಷ್ಟೇ ಅಲ್ಲದೆ ಕಲಿಸಿದ ಶಿಕ್ಷಕರಿಗೆ, ಪೋಷಕರಿಗೆ, ಸಂಸ್ಥೆಗೆ ಮತ್ತು ಇಡೀ ಸಮಾಜಕ್ಕೆ ಬರುತ್ತದೆ ಎಂದು ಅಭಿಪ್ರಾಯಪಟ್ಟರು.

ಅತಿಥಿಗಳಾಗಿ ಆರ್. ಸಣ್ಣಮ್ಮ, ಶಿಕ್ಷಣ ದತ್ತಿಯ ಧರ್ಮದರ್ಶಿ ಕೃಷ್ಣಮೂರ್ತಿ, ರಾಜಣ್ಣ, ಉಪಾಧ್ಯಕ್ಷರಾದ ಡಬ್ಲ್ಯು. ಎಚ್. ಅನಿಲ್‌ಕುಮಾರ್, ಸಂಸ್ಥೆಯ ಉಪಾಧ್ಯಕ್ಷ ಪಂಡಿತಾರಾಧ್ಯ ಮತ್ತು ಶಾಲೆಯ ಪ್ರಾಂಶುಪಾಲರಾದ ಶ್ಯಾಮಲಾ ನಾರಾಯಣ ಸ್ವಾಮಿ ವೇದಿಕೆಯನ್ನಲಂಕರಿಸಿದ್ದರು. ನಂತರ ವಿದ್ಯಾರ್ಥಿಗಳಿಂದ ವರ್ಣರಂಜಿತ ಸಾಂಸ್ಕೃತಿಕ ಕಾರ್ಯಕ್ರಮ ನೆರವೇರಿತು.

ಸಂಯುಕ್ತ ಕರ್ನಾಟಕ
2-2-2004



ಬೆಂಗಳೂರಿನ ಶೇಷಾದ್ರಿಪುರಂ ಕಾಲೇಜಿನ ಕ್ರೀಡಾದಿನ ಹಾಗೂ ವಾರ್ಷಿಕೋತ್ಸವ ಸಂದರ್ಭದಲ್ಲಿ ಖ್ಯಾತ ಟೆಸ್ಟ್ ಕ್ರಿಕೆಟ್ ಪಟು ಬ್ರಿಜೇಶ್ ಪಟೇಲ್ ಭಾಗವಹಿಸಿದ್ದರು. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ಕೆ.ಎಂ. ನಂಜಪ್ಪ, ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ ಈ ಸಂದರ್ಭದಲ್ಲಿ ಅವರೊಂದಿಗಿದ್ದರು.

ಫೆಬ್ರವರಿ 2, 2004 ಉದಯವಾಣಿ



ಶೇಷಾದ್ರಿಪುರಂ ಕಾಲೇಜು ಏರ್ಪಡಿಸಿದ್ದ ಕ್ರೀಡಾ ದಿನ ಹಾಗೂ ವಾರ್ಷಿಕೋತ್ಸವ ಸಂದರ್ಭದಲ್ಲಿ ಕರ್ನಾಟಕ ರಾಜ್ಯ ಕ್ರಿಕೆಟ್ ಅಸೋಸಿಯೇಷನ್ ಕಾರ್ಯದರ್ಶಿ ಬ್ರಿಜೇಶ್ ಪಟೇಲ್ ವಿಜೇತರಿಗೆ ಬಹುಮಾನ ವಿತರಿಸಿದರು. ಈ ಸಂದರ್ಭದಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಕಾರ್ಯದರ್ಶಿ ಡಬ್ಲ್ಯೂ.ಪಿ. ಕೃಷ್ಣ, ಅಧ್ಯಕ್ಷ ಕೆ.ಎಂ. ನಂಜಪ್ಪ, ಜಂಟಿ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ, ಬೆಂಗಳೂರು

**26-1-2004**



*ಬೆಂಗಳೂರಿನ ಶೇಷಾದ್ರಿಪುರ ಕಾಲೇಜಿನ ಪತ್ರಿಕೋದ್ಯಮ ಹಾಗೂ ಮನಃಶಾಸ್ತ್ರ ವಿಭಾಗ ಇತ್ತೀಚೆಗೆ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಆಲಿ ಖ್ವಾಜಾ, ಕೆ.ಎಂ. ನಂಜಪ್ಪ, ಡಬ್ಲ್ಯೂ.ಪಿ. ಕೃಷ್ಣ, ನಂದಿನಿ ಲಕ್ಷ್ಮೀಕಾಂತ್ ಪಾಲ್ಗೊಂಡಿದ್ದರು.*

ಉದಯವಾಣಿ

ಜನವರಿ 24, 2004



ಶೇಷಾದ್ರಿಪುರಂ ಪದವಿ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆಯ ವಿದ್ಯಾರ್ಥಿಗಳು ಮೊದಲ ಬಾರಿಗೆ 'ಸೇವಾ ಲೋಕ' ಎನ್ನುವ ವಿದ್ಯಾರ್ಥಿಗಳ ವಾರ್ತಾ ಸಂಚಿಕೆಯನ್ನು ಹೊರತಂದಿದ್ದಾರೆ. ಈ ಸಂಚಿಕೆಯನ್ನು ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಕಾರ್ಯದರ್ಶಿ ಡಬ್ಲ್ಯೂ.ಪಿ. ಕೃಷ್ಣ ಬಿಡುಗಡೆ ಮಾಡಿದರು.




ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರ ತರಬೇತಿ ಶಿಬಿರವನ್ನು ಶ್ರೀ ರಾಮಕೃಷ್ಣ ಮಠದ ಹರ್ಷಾನಂದಜೀ ಮಹಾರಾಜ್ ಉದ್ಘಾಟಿಸಿದರು. ಡಾ: ಗುರುರಾಜ ಕರ್ಜಗಿ, ಕೆ.ಎಂ. ನಂಜಪ್ಪ ಮತ್ತಿತರರು ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

# ಶಿಕ್ಷಣ ಪ್ರೇಮಿ ಕೃಷ್ಣ ಅವರಿಗೆ 'ಸಹಕಾರ ಸಿಂಧೂರ' ಪ್ರಶಸ್ತಿ

ಬೆಂಗಳೂರು, ಜ.21- ಶಿಕ್ಷಣ ಪ್ರೇಮಿ, ದಕ್ಷ ಆಡಳಿತಗಾರ ಆರ್. ಕೃಷ್ಣ ಅವರ 72ನೇ ಹುಟ್ಟುಹಬ್ಬದ ಸವಿನೆನಪಿಗಾಗಿ ಅವರಿಗೆ 'ಸಹಕಾರ ಸಿಂಧೂರ' ಪ್ರಶಸ್ತಿ ಹಾಗೂ ಬೆಳ್ಳಿ ಕಿರೀಟ ಧಾರಣೆ ಸಮಾರಂಭವು ಇತ್ತೀಚೆಗೆ ನಡೆಯಿತು.

ಆರ್. ಕೃಷ್ಣ ಅಭಿನಂದನಾ ಸಮಿತಿ ಹಾಗೂ ಯಲಹಂಕ ಉಪನಗರದ ಶಿಕ್ಷಕರ ವೇದಿಕೆ ಆಶ್ರಯದಲ್ಲಿ ನಡೆದ ಕಾರ್ಯಕ್ರಮದಲ್ಲಿ ಶ್ರೀ ನಂಜಾವಧೂತ ಸ್ವಾಮೀಜಿ ಮಾತನಾಡಿ, ಮನುಕುಲ ಉದ್ಧಾರವಾಗಿ ಪ್ರಗತಿ ಒಂದು ಕಡೆಯಾದರೆ, ಮತ್ತೊಂದೆಡೆ ಜೀವನದ ಮೌಲ್ಯ ಕುಸಿಯುತ್ತಿದ್ದು, ಹೆಚ್ಚಿನ ಜನ ಕಂಗಾಲಾಗಿದ್ದಾರೆ. ಎಲ್ಲಿ ಸ್ವಾರ್ಥಕ್ಕೆ ಮಹತ್ವ ಬರುವುದೊ ಅಲ್ಲಿ ಸಮಾಜ ಮುಂದುವರಿಯುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಇತರರ ದುಃಖದಲ್ಲಿ ಭಾಗಿಯಾದಾಗ ಮಾತ್ರ ಜೀವನ ಸಾರ್ಥಕವಾಗುತ್ತದೆ ಎಂದರು.

ಶ್ರೀ ಶಿವಕುಮಾರ ಸ್ವಾಮೀಜಿ, ಆರ್. ಕೃಷ್ಣ ಅವರಿಗೆ ಬೆಳ್ಳಿ ಕೀರೀಟಧಾರಣೆ ಮಾಡಿ, 'ಸಹಕಾರ ಸಿಂಧೂರ' ಪ್ರಶಸ್ತಿ ನೀಡಿ ಆಶೀರ್ವದಿಸಿದರು.

ಇಂದು, ನಾವೆಲ್ಲರೂ ಕಪ್ಪೆ ಚಿಪ್ಪಿನ ಹಾಗೆ ನಾವಾಯಿತು ನಮ್ಮ ಬದುಕಾಯಿತು ಎಂದು ನಿಷ್ಕ್ರಿಯರಾಗಿದ್ದೇವೆ. ಈ ನಿಷ್ಕ್ರಿಯತೆಯ ನಡುವೆ ಜೀವನದ ಕುರೂಪತೆಯೊಂದಿಗೆ ಹೋರಾಡಿ ವಿದ್ಯೆ ಕಲಿಕೆಗೆ ನೆರವಾಗುವ ಮೂಲಕ ನಿಜವಾದ ಮನುಷ್ಯತ್ವ ಇರುವವರು ಯಾವಾಗಲೂ ಹಿರಿಯರೇ. ತನ್ನ ವ್ಯಕ್ತಿತ್ವವನ್ನು ಸಮೂಹದಲ್ಲಿ ಕರಗಿಸಿಕೊಂಡು ಇತರರಿಗೆ ಸಹಾನುಭೂತಿಯನ್ನು ತೋರಿಸುವವರ ಬದುಕು ಸುಂದರ ಹಾಗೂ ಅಪೂರ್ವ ಎಂದು ಸಾಹಿತಿ ದೊಡ್ಡರಂಗೇಗೌಡ ಪ್ರಶಂಸಿಸಿದರು.

ಶೇಷಾದ್ರಿಪುರಂ ಶಿಕ್ಷಣದತ್ತಿ ಸಂಸ್ಥೆ ಪ್ರಧಾನ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ ಮಾತನಾಡಿ, ಬಾಲ್ಯದಿಂದಲೂ ಸಮಾಜ ಸೇವಾ ಗುಣವನ್ನು ಮೈಗೂಡಿಸಿಕೊಂಡು ಎಲ್ಲರೊಳಗೊಂದಾಗಿ, ಕಲ್ಲಾಗು ಕಷ್ಟಗಳ ಮಳೆಯ ವಿಧಿ ಸುರಿಯೇ ಎಂಬಂತೆ ಬದುಕಿನಲ್ಲಿ ಕಷ್ಟಗಳನ್ನೆಲ್ಲಾ ಯಾರ ಸಹಾಯಕ್ಕೂ ಕೈ ಚಾಚದೆ ಒಬ್ಬಂಟಿಯಾಗಿ ಎದುರಿಸಿ ಮನೆಗೆ ಮಲ್ಲಿಗೆಯಾದರು. ಅನೇಕ ಸಂಘ ಸಂಸ್ಥೆಗಳಲ್ಲಿ ಗುರುತಿಸಿಕೊಂಡು ಅವುಗಳ ಅಭಿವೃದ್ಧಿಗಳ ಮಾರ್ಗದರ್ಶನ ನೀಡಿ ಸದಾ ಸಮಾಜ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡ ಆರ್. ಕೃಷ್ಣರ ಜೀವನ ಶೈಲಿ ಪ್ರತಿಯೊಬ್ಬರಿಗೂ ಮಾದರಿಯಾಗಬೇಕು ಎಂದು ಶ್ಲಾಘಿಸಿದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆ ಅಧ್ಯಕ್ಷ ಕೆ.ಎಂ. ನಂಜಪ್ಪ ಅಧ್ಯಕ್ಷತೆ ವಹಿಸಿದ್ದರು. ಯಲಹಂಕ ಉಪನಗರ ಶಿಕ್ಷಕ ವೇದಿಕೆ ಪ್ರಾಂಶುಪಾಲರು, ಶಿಕ್ಷಕರು, ಶಿಕ್ಷಣ ದತ್ತಿಯ ಪದಾಧಿಕಾರಿಗಳು ಹಾಗೂ ಧರ್ಮದರ್ಶಿಗಳು ಹಾಜರಿದ್ದರು.

ಅಭಿನಂದನಾ ಸಮಿತಿ ಅಧ್ಯಕ್ಷ ಎಂ. ರಾಮಯ್ಯ ಸಹಕರಿಸಿದರು. ಎ. ಶ್ರೀಲತಾ ಮತ್ತು ತಂಡದಿಂದ ಸುಗಮ ಸಂಗೀತ ಏರ್ಪಡಿಸಲಾಗಿತ್ತು. ಎಚ್.ವಿ. ಗುಂಡಯ್ಯ ಮತ್ತು ಎಸ್.ಪಿ. ಮರಿಮಲ್ಲಯ್ಯ ವಂದಿಸಿದರು.




'ಸಹಕಾರಿ ಸಿಂಧೂರ' ಪ್ರಶಸ್ತಿ ಪ್ರದಾನ ಹಾಗೂ ಬೆಳ್ಳಿ ಕಿರೀಟ ಧಾರಣೆ ಸಮಾರಂಭದಲ್ಲಿ ಶ್ರೀ ನಂಜಾವಧೂತ ಸ್ವಾಮೀಜಿ, ಶ್ರೀ ಶಿವಕುಮಾರ ಸ್ವಾಮೀಜಿ, ಸಾಹಿತಿ ಪ್ರೊ. ದೊಡ್ಡರಂಗೇಗೌಡ, ಶಿಕ್ಷಣ ದತ್ತಿ ಸಂಸ್ಥೆ ಅಧ್ಯಕ್ಷ ಕೆ.ಎಂ. ನಂಜಪ್ಪ, ಪ್ರಧಾನ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ ಉಪಸ್ಥಿತರಿದ್ದರು.




ಬೆಂಗಳೂರಿನಲ್ಲಿ ಮಂಗಳವಾರ ಶೇಷಾದ್ರಿಪುರ ಪದವಿ ಕಾಲೇಜು ಮತ್ತು 'ಡೆಕ್ಕನ್ ಹೆರಾಲ್ಡ್' ಜಂಟಿಯಾಗಿ ಏರ್ಪಡಿಸಿದ್ದ 'ಸಿಕ್ಸ್ ಸ್ಪೇಸಸ್ ಆಫ್ ಅಮಾಲ್ಗಮೇಷನ್' ಅಂತರ್‌ಕಾಲೇಜು ಉತ್ಸವದ ಉದ್ಘಾಟನಾ ಸಮಾರಂಭದಲ್ಲಿ ಕಾಲೇಜಿನ ಪ್ರಾಂಶುಪಾಲ ಡಾ.ಸಿ.ಎಲ್.ಎನ್.ಪ್ರಕಾಶ್ ಮಾತನಾಡಿದರು. ಉಪನ್ಯಾಸಕಿ ಬಿಂದು ಅಶ್ವಿನಿ, ಬಂಜಾರ ಅಕಾಡೆಮಿಯ ಅಧ್ಯಕ್ಷ ಅಲಿ ಖ್ವಾಜಾ, ಶೇಷಾದ್ರಿಪುರ ಶೈಕ್ಷಣಿಕ ಟ್ರಸ್ಟ್ ಅಧ್ಯಕ್ಷ ಕೆ.ಎಂ.ನಂಜಪ್ಪ, ಕಾರ್ಯದರ್ಶಿ ಡಬ್ಲ್ಯು.ಡಿ.ಕೃಷ್ಣ, ಶ್ರೀಮತಿ ನಂಜಪ್ಪ, ಉಪನ್ಯಾಸಕಿ ನಂದಿನಿ ಲಕ್ಷ್ಮಿಕಾಂತ್ ಉಪಸ್ಥಿತರಿದ್ದರು.

ಬೆಂಗಳೂರು ವಿಜಯ
ಸೋಮವಾರ 19 ಜನವರಿ 2004

■ ಭಾರತೀಯ ರೆಡ್ ಕ್ರಾಸ್ ಸಂಸ್ಥೆ : ಪ್ರಥಮ ಚಿಕಿತ್ಸಾ ತರಬೇತಿ ಶಿಬಿರ. ಉದ್ಘಾಟನೆ: ಸಂಸ್ಥೆ ಖಜಾಂಚಿ ಡಬ್ಲ್ಯೂ.ಪಿ. ಕೃಷ್ಣ, ಮುಖ್ಯ ಅತಿಥಿಗಳು: ಸಾರ್ವಜನಿಕ ಆಸ್ಪತ್ರೆ ಆಡಳಿತಾಧಿಕಾರಿ ಡಾ. ವಸಂತ್‌ಕುಮಾರ್, ತಾಲೂಕು ಆರೋಗ್ಯಾಧಿಕಾರಿ ಡಾ.ಜಿ.ಎ. ವೆಂಕಟೇಶಲು, ವೃತ್ತ ನಿರೀಕ್ಷಕ ಪಾಲಾಕ್ಷಯ್ಯ, ಅಧ್ಯಕ್ಷತೆ: ನೆಲಮಂಗಲ ಔಷಧ ವ್ಯಾಪಾರಿಗಳ ಸಂಘದ ಅಧ್ಯಕ್ಷ ಡಿ. ವಾದಿರಾಜ್. ಸ್ಥಳ: ಸಾರ್ವಜನಿಕ ಆಸ್ಪತ್ರೆ, 1ನೇ ಮಹಡಿ, ನೆಲಮಂಗಲ. ಸಂಜೆ 4.

ಬೆಂಗಳೂರು ವಿಜಯ
ಮಂಗಳವಾರ 13 ಜನವರಿ 2004





ಶೇಷಾದ್ರಿಪುರಂ ಕಾಲೇಜಿನ ಯುವತಿಯರ ತಂಡ ಬೆಂಗಳೂರಿನ ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಏರ್ಪಡಿಸಿದ್ದ ಅಂತರ್ ಕಾಲೇಜು ಥ್ರೋಬಾಲ್ ಸ್ಪರ್ಧೆಯಲ್ಲಿ ಪ್ರಶಸ್ತಿ ಪಡೆದಿದೆ. ನಿಂತವರು: ಮೇಘಾ, ವಿದ್ಯಾ, ಪೂರ್ಣಿಮಾ, ಜೀವಿತಾ ಸೌಮ್ಯಾ, ದೀಪ್ತಿ, ಭೂಮಿಕಾ, ದಿವ್ಯಾ, ಪಲ್ಲವಿ. ಕುಳಿತವರು: ಡಾ. ಆರ್. ಧನ್‌ಪಾಲ್ (ಕ್ರೀಡಾ ಕಾರ್ಯದರ್ಶಿ), ಡಾ. ಸಿ.ಎಲ್.ಎನ್. ಪ್ರಕಾಶ್ (ಪ್ರಾಂಶುಪಾಲ), ಡಬ್ಲ್ಯು.ಪಿ. ಕೃಷ್ಣ (ಗೌರವ ಕಾರ್ಯದರ್ಶಿ), ವಾಂಗಲ್ ಪ್ರತೀಕ್ಷಾ ನಾಯಕ್ (ನಾಯಕಿ), ಎಸ್. ವಿನಯ್ (ದೈಹಿಕ ಶಿಕ್ಷಣ ನಿರ್ದೇಶಕ).

ಬೆಂಗಳೂರು ವಿಜಯ
ಶನಿವಾರ 10 ಜನವರಿ 2004




ಯಲಹಂಕ ಉಪನಗರದಲ್ಲಿರುವ ಶೇಷಾದ್ರಿಪುರಂ ಆಂಗ್ಲ ಹಿರಿಯ ಪ್ರಾಥಮಿಕ ಶಾಲೆಯ ವಾರ್ಷಿಕೋತ್ಸವದಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಕೆ.ಎಂ. ನಂಜಪ್ಪ, ಡಾ. ಶೋಭಾ ಸಿ. ದೇವಿ, ಸಾರ್ವಜನಿಕ ಶಿಕ್ಷಣ ಇಲಾಖೆ ನಿವೃತ್ತ ನಿರ್ದೇಶಕ ಪಿ.ಎಸ್. ರವೀಂದ್ರನಾಥ್, ದತ್ತಿಯ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ ಹಾಜರಿದ್ದರು.



ಬಾಗೇಪಲ್ಲಿಯ ನ್ಯಾಷನಲ್ ಕಾಲೇಜಿನಲ್ಲಿ ಏರ್ಪಡಿಸಲಾಗಿದ್ದ ಬೆಂಗಳೂರು ವಿವಿ ಅಂತರ್ ಕಾಲೇಜು ಯೋಗಸ್ಪರ್ಧೆಯಲ್ಲಿ ಶೇಷಾದ್ರಿಪುರಂ ಕಾಲೇಜಿನ ಯುವತಿಯರ ತಂಡ ಐದು ಪ್ರಶಸ್ತಿ ಪಡೆಯಿತು. ನಿಂತವರು: ಡಿ.ಆರ್. ಶ್ವೇತಾ, ಬಿ.ಆರ್. ಶಮಾ, ಆರ್. ಜಿ.ಸೌಮ್ಯ, ಕೆ. ಅಂಜನಾ. ಕುಳಿತವರು: ಕ್ರೀಡಾ ಕಾರ್ಯದರ್ಶಿ ಡಾ. ಆರ್. ಧನಪಾಲ್, ಪ್ರಾಂಶುಪಾಲ ಪ್ರೊ. ಸಿ.ಎಲ್.ಎನ್. ಪ್ರಕಾಶ್, ಗೌರವಕಾರ್ಯದರ್ಶಿ ಕೃಷ್ಣ, ನಾಯಕಿ ನಯನಾ, ದೈಹಿಕ ಶಿಕ್ಷಣ ನಿರ್ದೇಶಕ ವಿನಯ್. ಈ ಯೋಗಪಟುಗಳು ಅಖಿಲ ಭಾರತ ಅಂತರ್ ವಿವಿ ಯೋಗಸ್ಪರ್ಧೆಯಲ್ಲಿ ಬೆಂಗಳೂರು ವಿವಿ ಪ್ರತಿನಿಧಿಸಲಿದ್ದಾರೆ.



ಬೆಂಗಳೂರು ಅಂತರ ವಿಶ್ವವಿದ್ಯಾಲಯ ಯೋಗ ಸ್ಪರ್ಧೆಯಲ್ಲಿ ಉತ್ತಮ ಸಾಧನೆ ಮಾಡಿರುವ ಬೆಂಗಳೂರಿನ ಶೇಷಾದ್ರಿಪುರಂ ಕಾಲೇಜಿನ ಯುವತಿಯರ ತಂಡದೊಂದಿಗೆ ಪ್ರಾಂಶುಪಾಲ ಸಿ.ಎಲ್.ಎನ್. ಪ್ರಕಾಶ, ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ಡಬ್ಲ್ಯೂ. ಟಿ. ಕೃಷ್ಣ ದೈಹಿಕ ಶಿಕ್ಷಣ ನಿರ್ದೇಶಕ ಡಾ. ಆರ್. ಧರ್ಮಪಾಲ ಮತ್ತಿತರರು.